# ಕೃತಿನೋಟ

(ಇಪ್ಪತ್ತೆಂಟು ಪುಸ್ತಕಗಳ ಪರಿಚಯ)

ಎಸ್. ಚನ್ನಪ್ಪ






ಅರ್ಕಾವತಿ ಪ್ರಕಾಶನ ಮೈಸೂರು



# ಅರಿಕೆ

ಸಾಹಿತ್ಯದ ವಿವಿಧ ಪ್ರಕಾರಗಳಿಗೆ ಸಂಬಂಧಿಸಿದ ಇಪ್ಪತ್ತೆಂಟು ಪುಸ್ತಕಗಳನ್ನು ಕುರಿತ ಪರಿಚಯ-ಅವಲೋಕನಗಳ ಸಂಕಲನ ಪ್ರಸ್ತುತ ಪುಸ್ತಕ. 'ಪುಸ್ತಕ ಪ್ರಪಂಚ' ಮತ್ತು 'ಗ್ರಂಥಲೋಕ'ದ ಸಂಪಾದಕರ ಅಪೇಕ್ಷೆಯಂತೆ ಈ 'ಪರಿಚಯ'ಗಳನ್ನು ಬರೆದಿದ್ದಾಯಿತು. ಅವರ ವಿಶ್ವಾಸವನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳುತ್ತೆನೆ. ಎಂದಿನಂತೆ ಈ ಪುಸ್ತಕವನ್ನು ಬೇಗ ಮುದ್ರಿಸಿಕೊಟ್ಟ ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್ಸಿನ ವ್ಯವಸ್ಥಾಪಕರಿಗೆ ನಾನು ಕೃತಜ್ಞ.

ಎಸ್. ಚನ್ನಪ್ಪ.

## ಮಕ್ಕಳಿಗಾಗಿ ಎಸ್. ಚನ್ನಪ್ಪನವರ ರಚನೆಗಳು

ಚಿನ್ನದ ತಟ್ಟೆ

ಮಿಂಚಿದ ಮಹಿಳೆಯರು

ಮೂವರು ಮಹನೀಯರು

ಇಬ್ಬರು ಹಿರಿಯರು

ಇಬ್ಬರು ಮಾನ್ಯರು

ಗಾಂಧೀಜಿ ಕಥೆಗಳು

ನೆಹರೂಜಿ ಕಥೆಗಳು

ಮಕ್ಕಳ ಸಾಹಿತ್ಯ ಶಿಲ್ಪಿಗಳು

ಬಿ ಎಂ ಶ್ರೀ

ಕೈಲಾಸಂ

ಕುವೆಂಪು ಕಥೆ

ಧರ್ಮದೀಪಕರು

# ೧ 'ಸಾಹಿತ್ಯದಿಂದ ಆಗುವ ಕೆಲಸ'

## ಮಾಸ್ತಿ ವೆಂಕಟೇಶ ಅಯ್ಯಂಗಾರ್

'ಕನ್ನಡದ ಅಶ್ವಿನೀ ದೇವತೆ'ಗಳಲ್ಲಿ ಒಬ್ಬರೆಂದು ಹೆಸರಾಗಿದ್ದ ದಿವಂಗತ ತಳುಕಿನ ವೆಂಕಣ್ಣಯ್ಯನವರ ಜ್ಞಾಪಕೋಪನ್ಯಾಸ ಮಾಲೆಯಲ್ಲಿ ಬೆಂಗಳೂರಿನ ಗೋಖಲೆ ವಿಚಾರ ಸಂಸ್ಥೆಯ ಆಶ್ರಯದಲ್ಲಿ ಮಾಸ್ತಿ ಅವರು 'ಸಾಹಿತ್ಯದಿಂದ ಆಗುವ ಕೆಲಸ' ಕುರಿತು ಮಾಡಿದ ಉಪನ್ಯಾಸ, ಇದೀಗ ಪುಸ್ತಕ ರೂಪದಲ್ಲಿ ಬಂದಿದೆ.

ಸಾಹಿತ್ಯವನ್ನು ಆಶ್ರಯಿಸಿ ತಾವು ಉಂಡ ಸುಖಗಳನ್ನು ಮಾಸ್ತಿಯವರು ಈ ಪುಸ್ತಕದಲ್ಲಿ ವಿವರವಾಗಿ ನಿರೂಪಿಸಿದ್ದಾರೆ.

'ಸಾಹಿತ್ಯ ಧರ್ಮದಂತೆ, ತತ್ವದಂತೆ ಮಾನವನ ಚೇತನದ ಉದ್ಧಾರಕ್ಕೆ ಸಾಧನ ಆಗಬಲ್ಲದು.' ಎಂಬ ನಂಬಿಕೆಯಿಂದಲೇ ಸಾಹಿತ್ಯದ ಉಪಾಸನೆಯನ್ನು ಕೈಗೊಂಡಿದ್ದುದಾಗಿಯೂ, ಇದರಿಂದ ಜೀವನದಲ್ಲಿ ತಮಗೆ ಸುಖ, ಸಂತೋಷಗಳು ದೊರಕಿದವೆಂದೂ ಮಾಸ್ತಿಯವರು ಹೇಳಿದ್ದಾರೆ. ಇದಕ್ಕೆ ಪೂರಕವಾಗಿ ಅವರು ಓದಿದ ಅನೇಕ ಪುಸ್ತಕಗಳನ್ನು ಉದಾಹರಿಸಿ, ಅವು ನೀಡಿದ ಅಮೃತವನ್ನು ಉಂಡು ಬೆಳೆದ ರೀತಿಯನ್ನು ವಿವರಿಸಿದ್ದಾರೆ. ತಮ್ಮ ಜೀವನದ ಹಲವು ಘಟ್ಟಗಳಲ್ಲಿ ಯಾವ ಯಾವ ಬರವಣಿಗೆಯಿಂದ ಯಾವ ಬಗೆಯ ಆನಂದ-ನೆಮ್ಮದಿಗಳನ್ನು ಪಡೆದರು ಮತ್ತು ಅದೆ ದಾರಿಯಲ್ಲಿ ಮುಂದೆ ನಡೆದಾಗ, ಅನುಭವ ಹೆಚ್ಚಿದಂತೆಲ್ಲಾ ಮತ್ತಷ್ಟು ಕಾವ್ಯಸುಖವನ್ನು ಪಡೆಯಲು ಸಾಧ್ಯವಾಯಿತು ಎಂಬುದನ್ನು ನಿರೂಪಿಸಿದ್ದಾರೆ. ಷೇಕ್ಸ್‌ಪಿಯರ್‌ನ ಒಂದು ನೂರು ಪಂಕ್ತಿಗಳು, ಜೊತೆಗೆ ಕೀಟ್ಸ್, ವರ್ಡ್ಸ್‌ವರ್ತರ ಕವನಗಳನ್ನು ಓದಿ, ಸತ್ಯ, ಹಾಗೂ ಸೌಂದರ್ಯ ಪ್ರಜ್ಞೆಯನ್ನು ಮತ್ತು ಜೀವನದಲ್ಲಿ ಒಂದು ಗುರಿ-ಇವುಗಳನ್ನು ಅರಿತು, ಬದುಕನ್ನು ರೂಪಿಸಿಕೊಳ್ಳಲು ಸಹಾಯವಾಯಿತೆಂದಿದ್ದಾರೆ.

'ಕಾವ್ಯ ಸಂಪರ್ಕದಿಂದ ಚೇತನ ಬೆಳಕನ್ನು ಹೊಂದುತ್ತದೆ. ದೀಪದಿಂದ ದೀಪ ಹಚ್ಚಿಕೊಳ್ಳುವಂತೆ ಕವಿಯ ಚೇತನದಿಂದ ಓದುವವನ

ಚೇತನವೂ ಜ್ಯೋತಿಯನ್ನು ಪಡೆಯುತ್ತದೆ'—ಎಂಬ ಮಾತನ್ನು ಹೇಳಿ, ಸಾಹಿತ್ಯೋಪಾಸನೆಯಿಂದ ಈ ತೆರನಾದ ಬೆಳಕನ್ನು ಪಡೆಯಬಹು ದೆಂದಿದ್ದಾರೆ.

"ಒಟ್ಟನಲ್ಲಿ ಕಾವ್ಯ ಮನುಷ್ಯನನ್ನು ಅವನಿಗೆ ಸಹಜವಾದ ಸರಳತೆಯ ಕಡೆಗೆ ಸೆಳೆಯುತ್ತದೆ. ಮೊದಲು ಕಂಡಾಗ ಸುಖಕೊಟ್ಟು ಮತ್ತೆ ಮತ್ತೆ ನೋಡಿದ ಕಾರಣದಿಂದ ಆ ಸುಖವನ್ನು ಕೊಡಲಾರದೆ ಹೋದ ಪ್ರಕೃತಿ ಸೌಂದರ್ಯ ಕಾವ್ಯದ ಮಹಿಮೆಯಿಂದ ಮತ್ತೆ ಕಣ್ಣಿಗೆ ಕಾಣು ವಂತಾಗುತ್ತದೆ—ಎಂದರೆ ಕಾವ್ಯ ಜೋಮು ಹಿಡಿದಿರುವ ಚೇತನದ ಜೋಮನ್ನು ಬಿಡಿಸುತ್ತದೆ. ಪ್ರಕೃತಿ ಸೌಂದರ್ಯದಂತೆ ಉಳಿದ ಸೌಂದರ್ಯ ವನ್ನು ಗ್ರಹಿಸುವ ಶಕ್ತಿಯನ್ನು ನಮಗೆ ಕೊಡುತ್ತದೆ. ನಮ್ಮನ್ನು ಹೀಗೆ ಪೂರ್ಣ ಮಾನವರನ್ನಾಗಿ ಮಾಡುತ್ತದೆ"—ಎಂಬ ಅಭಿಪ್ರಾಯಕ್ಕೆ ಬಂದಿದ್ದಾರೆ. ಕಾವ್ಯದಿಂದ ಆಗುವ ಕೆಲಸವನ್ನು, ಮಾಸ್ತಿಯವರು ತಮ್ಮ ಅನುಭವದ ಮುಂಬೆಳಕಿನಲ್ಲಿ ಪರೀಕ್ಷಿಸಿ, ಈ ತೀರ್ಮಾನಕ್ಕೆ ಬಂದಿರುವುದರಿಂದ, ಈ ಅಭಿಪ್ರಾಯಕ್ಕೆ ಹೆಚ್ಚಿನ ಬೆಲೆ ಬಂದಿದೆ.

ಸಾಹಿತ್ಯೋಪಾಸನೆಯನ್ನು ಕೈಗೊಂಡಿರುವವರು, ಅದರಿಂದ ಆಗುವ ಕೆಲಸವೇನು? ಸಾಹಿತ್ಯ ತಮ್ಮ ಮೇಲೆ ಬೀರಿದ-ಬೀರುತ್ತಿರುವ ಪ್ರಭಾವ ವೇನು? ಎಂಥಹದು? ಎಂಬುದನ್ನು ಅರಿಯಲು ಈ ಪುಸ್ತಕ ತುಂಬ ನೆರ ವಾಗುತ್ತದೆ. ಈ ಉಪನ್ಯಾಸವನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದ್ದು ಮೆಚ್ಚುಗೆಯ ಸಂಗತಿಯಾಗಿದೆ. ಈ ಪುಸ್ತಕದ ಇನ್ನೊಂದು ವೈಶಿಷ್ಟ್ಯ ವೆಂದರೆ, ವೆಂಕಣ್ಣಯ್ಯನವರನ್ನು ಕುರಿತ ಎರಡು ಪುಟಗಳ ಪರಿಚಯ ಲೇಖನವನ್ನು "ಪ್ರಬುದ್ಧ ಕರ್ಣಾಟಕ"ದಿಂದ ಉದ್ಧರಿಸಿಕೊಂಡಿರುವುದು. ಇದರಿಂದ ಈ ಪುಸ್ತಕದ ಮೌಲ್ಯ ಹೆಚ್ಚಿದೆ ಎನ್ನಬಹುದು.

## ೨ 'ನಂದಾನೆನಪು'

### ಕ. ವೆಂ. ರಾಘವಾಚಾರ್

ಕನ್ನಡದಲ್ಲಿ ಒಬ್ಬ ಲೇಖಕ ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇ ವಿಷಯಗಳನ್ನು ಕುರಿತು ಬರೆದ ಬಿಡಿ ಲೇಖನಗಳೆಲ್ಲ ಒಂದೆಡೆ ಸಂಕ

ಗೊಂಡು ಪ್ರಕಟವಾಗಿರುವುದು ಅಪರೂಪ. ಆದರೂ ಬಿ.ಎಂ. ಶ್ರೀ. ಅವರ ' ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ' (೧೯೪೪) ; ಎ. ಆರ್. ಕೃ. ಅವರ ' ಭಾಷಣಗಳು ಲೇಖನಗಳು ' (೧೯೬೦); ಕುವೆಂಪು ಅವರ ' ಷಷ್ಠಿನಮನ ' (೧೯೬೪); ಡಿ. ಎಲ್. ಎನ್. ಅವರ ' ಪೀಠಿಕೆಗಳು-ಲೇಖನಗಳು ' (೧೯೭೨)-ಇಂಥ ಕೆಲವು ಕೃತಿಗಳು ಪ್ರಕಟವಾಗಿರುವುದು ಗಮನಾರ್ಹ. ಇದೀಗ ಪ್ರಕಟವಾಗಿರುವ "ನಂದಾನೆನಪು" ಕ. ವೆಂ. ರಾಘವಾಚಾರ್ ಅವರ ಲೇಖನಗಳು, ಮುನ್ನುಡಿಗಳು ಮತ್ತು ಭಾಷಣಗಳ ಸಂಕಲನ.

ಕನ್ನಡದ ಹಿರಿಯ ವಿದ್ವಾಂಸರಲ್ಲಿ ಒಬ್ಬರೂ ; ವ್ಯಾಕರಣ ಭಾಷಾ ಶಾಸ್ತ್ರಗಳಲ್ಲಿ ಪಂಡಿತರೂ ; ಕನ್ನಡ ಸಂಸ್ಕೃತ ಇಂಗ್ಲಿಷ್ ಭಾಷೆಗಳ ಜತೆಗೆ ಗ್ರೀಕ್ ಮತ್ತು ಪಾರ್ಸೀ ಭಾಷೆಗಳಲ್ಲಿ ಪರಿಶ್ರಮವುಳ್ಳವರೂ ; ಕಟ್ಟು ನಿಟ್ಟಾದ ಶಿಸ್ತಿನ ಜೀವನಕ್ಕೆ ಹೆಸರಾಗಿದ್ದವರಾದ ಪ್ರೊಫೆಸರ್ ಕ.ವೆಂ. ರಾಘವಾಚಾರ್ ಅವರು ಸುಮಾರು ೪ ದಶಕಗಳ ಅವಧಿಯಲ್ಲಿ ; ಬೇರೆ ಬೇರೆ ಸಂದರ್ಭಗಳಲ್ಲಿ ಬರೆದು ಪ್ರಕಟಿಸಿದ ಬಗೆ ಬಗೆಯ ಲೇಖನಗಳು ' ನಂದಾ ನೆನಪು 'ನಲ್ಲಿ ಒಗ್ಗೂಡಿವೆ. ಭಾಷಾವಿವೇಚನೆ ; ಸಾಹಿತ್ಯ ವಿವೇಚನೆ ಮತ್ತು ಇತರ-ಎಂಬ ಮೂರು ಶೀರ್ಷಿಕೆಗಳಲ್ಲಿ ಒಟ್ಟು ೩೮ ಲೇಖನಗಳಿವೆ. ಜೊತೆಗೆ ಇಂಗ್ಲಿಷ್‌ನಲ್ಲಿ ಬರೆದ ೧೦ ಲೇಖನಗಳೂ ಇಲ್ಲಿಯೇ ಸಮಾವೇಶಗೊಂಡಿವೆ. ' ನಂದಾನೆನಪು ' ಹೆಸರಿನಲ್ಲಿ ಲೇಖಕರು ತಮ್ಮ ಬದುಕಿನ ಪ್ರಮುಖ ಘಟ್ಟಗಳನ್ನು ರೇಖಿಸಿದ್ದಾರೆ.

ಭಾಷಾಶುದ್ಧಿ ; ನುಡಿನಂಟು ; ನುಡಿಮೋಸ-ಮುಂತಾದ ೮ ಲೇಖನ ಗಳು ' ಭಾಷಾ ವಿವೇಚನೆ ' ಶೀರ್ಷಿಕೆಯಲ್ಲಿ ಪ್ರಕಟವಾಗಿದ್ದು ಭಾಷಾ ಶಾಸ್ತ್ರಕ್ಕೆ ಸಂಬಧಿಸಿದ ಬೆಲೆಯುಳ್ಳ ಬರೆಹಗಳಾಗಿವೆ.

' ಸಾಹಿತ್ಯ ವಿವೇಚನೆ ' ಶೀರ್ಷಿಕೆಯಲ್ಲಿ ೨೦ ಲೇಖನಗಳಿವೆ. ಇವು ಗಳಲ್ಲಿ ೯ ಲೇಖನಗಳು ಗ್ರೀಕ್ ರುದ್ರನಾಟಕಕ್ಕೆ ಸಂಬಂಧಿಸಿದುವು. ಇನ್ನುಳಿದವು ಸಂಕೀರ್ಣ ಬರಹಗಳಾಗಿವೆ.

' ನೆತ್ತಮನಾಡಿದರು '?-ಲೇಖನದಲ್ಲಿ ಪಂಪಭಾರತದ ' ನೆತ್ತಮನಾಡಿ ಭಾನುಮತಿ ಸೋಲ್ತಡೆ.... 'ಎಂಬ ಪದ್ಯದ ಅರ್ಥ ಹೇಳಲು ತಮಿಳು ಭಾರತದಿಂದ ದೊರೆತ ನೆರವನ್ನು ಕುರಿತು ವಿವರವಾಗಿ ವಿವೇಚಿಸಿದ್ದಾರೆ.

ಸಂಶೋಧನಾ ವಿದ್ಯಾರ್ಥಿಗಳು ಅಗತ್ಯವಾಗಿ ಗಮನಿಸಬೇಕಾದ ಲೇಖನ. 'ಜನ್ನ ಕವಿ ಮತ್ತು ಆತನ ಕೃತಿಗಳು'–ಲೇಖಕರೆ ಸಂಪಾದಿಸಿರುವ 'ಯಶೋಧರ ಚರಿತೆ'ಗೆ ಬರೆದ ಪೀಠಿಕೆ. ಕನ್ನಡದ ಪ್ರಮುಖ ಕವಿಗಳಲ್ಲಿ ಒಬ್ಬನಾದ ಜನ್ನನ ಕಾಲ ದೇಶ ಮತ್ತು ಕೃತಿಗಳನ್ನು; ಅವನ ವ್ಯಕ್ತಿತ್ವ ವನ್ನು ಈ ಲೇಖನದಲ್ಲಿ ಹೇಳಿದ್ದಾರೆ. ಸಾಕಷ್ಟು ದೀರ್ಘವಾಗಿರುವ ಈ ಲೇಖನದಲ್ಲಿ ಜನ್ನನ ಎರಡು ಕೃತಿಗಳನ್ನು–ಅನಂತನಾಥ ಪುರಾಣ ಮತ್ತು ಯಶೋಧರ ಚರಿತ್ರೆ–ವಿಮರ್ಶಿಸಿದ್ದಾರೆ. ವಿಮರ್ಶೆ ವಸ್ತುನಿಷ್ಠ ವಾಗಿದ್ದು, ಜನ್ನ ಕವಿಯ ಬಗ್ಗೆ ಒಂದು ಅವಲೋಕನ ಸಾಧ್ಯವಾಗಿದೆ. ಥಳುಕಿಲ್ಲದ ತಳುಕಿನ ಮಹನೀಯರು; ಮಾಸ್ತಿಯವರ ಮಾತುಗಾರಿಕೆ; ಶ್ರೀ ಅವರ ಜೀವನ ಪರಿಚಯ ಇವು ವ್ಯಕ್ತಿ ಚಿತ್ರಗಳಾಗಿದ್ದು; ಕ್ರಮವಾಗಿ ವೆಂಕಣ್ಣಯ್ಯ, ಮಾಸ್ತಿ ಮತ್ತು ಬಿ.ಎಂ. ಶ್ರೀ ಅವರ ವ್ಯಕ್ತಿತ್ವದ ಹಲವು ಮುಖಗಳ ಪರಿಚಯವಿದೆ. 'ಮಹಾರಾಜ ಕಾಲೇಜಿನ ಕನ್ನಡ ಶಾಖೆ'–ಆ ಕಾಲೇಜಿನ ಕನ್ನಡ ಶಾಖೆಯ ಚರಿತ್ರೆಯನ್ನು ವಿವರವಾಗಿ ಮತ್ತು ಸ್ವಾರಸ್ಯ ವಾಗಿ ನಿರೂಪಿಸುವ ಆಕರ್ಷಕ ಬರಹ. 'ತುಮಕೂರಿನವರ ಗುತ್ತಿಗೆ' ಮತ್ತು 'ಉದ್ಘಾಟನಾ ಭಾಷಣ' ಲೇಖನಗಳಲ್ಲಿ ತುಮಕೂರು ಜಿಲ್ಲೆಯ ಲೇಖಕರು ಕನ್ನಡ ಸಾಹಿತ್ಯಕ್ಕೆ ಕೊಟ್ಟ ಕೊಡುಗೆಗಳನ್ನು ಹೇಳಲಾಗಿದೆ.

ಗ್ರೀಕ್ ರುದ್ರನಾಟಕಗಳನ್ನು ಕುರಿತು ಗ್ರೀಕ್ ರುದ್ರನಾಟಕ ೧ ಮತ್ತು ೨; ಅಯಸ್ಕಿಲೊಸ್; ಸೊಫೊಕ್ಲೆಸ್; ಅರಿಸ್ಟೋಫನೇಸ್; ಅಗಮೆಮ್ನೋನ್; ಥೀಬ್ಸ್ ಮತ್ತು ಈಡಿಪಸ್; ಒಯ್ದಿ ಪೌಸ್ ದೊರೆ; ಅಂತಿಗೊನೆ ಪೆರಿಕ್ಲೀಸ್ ಮಾಡಿದ ಭಾಷಣಗಳು–ಹೀಗೆ ೧೦ ಲೇಖನ ಗಳಿದ್ದು, ಗ್ರೀಕ್ ಸಾಹಿತ್ಯದ ಮುಖ್ಯ ಸಾಹಿತ್ಯ ಪ್ರಕಾರವಾಗಿರುವ ರುದ್ರ ನಾಟಕವನ್ನು ಕುರಿತಂತೆ ಒಟ್ಟಾರೆ ಚಿತ್ರವೊಂದನ್ನು ಕಲ್ಪಿಸಿಕೊಳ್ಳಲು ಸಹಾಯಕವಾಗಿವೆ.

ಗ್ರೀಕ್ ರುದ್ರನಾಟಕ–೧, ೨ ಲೇಖನಗಳಲ್ಲಿ ಗ್ರೀಕ್ ರುದ್ರನಾಟಕದ ಹುಟ್ಟು–ಬೆಳವಣಿಗೆ ಮತ್ತು ಪ್ರಮುಖ ಘಟ್ಟಗಳನ್ನು ಕುರಿತು ಪರಿಚಯಿಸಿ ದ್ದಾರೆ. ಅಯಸ್ಕಿಲೊಸ್, ಸೊಫೊಕ್ಲೆಸ್. ಯುರಿಪಿಡೀಸ್–ಈ ಮೂವರು ಗ್ರೀಕ್ ರುದ್ರನಾಟಕದ 'ತ್ರಿಮೂರ್ತಿ'ಗಳು. ಇವರ ಆಗಮನ

ದೊಂದಿಗೆ ರುದ್ರ ನಾಟಕ ಆರಂಭವಾಗಿ ಅವರ ಜೀವಿತ ಕಾಲದಲ್ಲಿಯೇ ಅಭಿವೃದ್ಧಿಯನ್ನು ಸಾಧಿಸಿತು. ಇದಕ್ಕೆ ಈ ತ್ರಿಮೂರ್ತಿಗಳ ಸಾಹಸವೇ ಕಾರಣ. ಇವರ ಅನಂತರ ಬಂದ ನಾಟಕಕಾರರು ಇವರ ಎತ್ತರಕ್ಕೆ ನಿಲ್ಲಲಾರದೆ ಹೋದರು. 'ಈ ಕಾರಣಕ್ಕಾಗಿಯೇ ಗ್ರೀಕ್ ರುದ್ರನಾಟಕದಲ್ಲಿ ವೈವಿಧ್ಯವಾಗಲಿ-ವಿಸ್ತಾರವಾಗಲಿ ಅಷ್ಟಾಗಿ ಕಾಣುವುದಿಲ್ಲ'-ಎಂದು ಸಮರ್ಥವಾಗಿ ಗುರುತಿಸಿದ್ದಾರೆ.

ಅಗೆಮೆಮ್ನೋನ್ ಲೇಖನದಲ್ಲಿ ಆ ನಾಟಕದ ಕಥಾಸಾರಾಂಶವನ್ನು ಹೇಳಿ; ನಾಟಕವನ್ನು ವಸ್ತುನಿಷ್ಠವಾಗಿ ವಿಮರ್ಶಿಸಿದ್ದಾರೆ. ಒಯ್ದಿಪೌಸ್ ದೊರೆ ನಾಟಕ ಕೂಡ ಇದೇ ಸಾಲಿಗೆ ಸೇರುವ ಇನ್ನೊಂದು ವಿಮರ್ಶಾ ಲೇಖನ. ಸೊಪೊಕ್ಲೆಸ್ ಮಹಾಕವಿಯ ಅಂತಿಗೊನೆ ಗ್ರಂಥಕ್ಕೆ ಪೀಠಿಕೆಯಾಗಿ ಬರೆದಿರುವ ಥಿಬ್ಸ್ ಮತ್ತು ಈಡಿಪಸ್ ಹಾಗೂ ಅಂತಿಗೊನೆ ಲೇಖನಗಳು ಆ ನಾಟಕಗಳನ್ನು ಪರಿಚಯಿಸುತ್ತವೆ. ಗ್ರೀಕ್ ನಾಟಕಗಳಲ್ಲಿ ಸುಂದರವಾದ ನಾಟಕ ಎಂದು ಹೆಸರಾಗಿರುವ ಅಂತಿಗೊನೆಯನ್ನು ಕುರಿತ ಒಂದು ವಿಮರ್ಶೆಯನ್ನು ಈ ಲೇಖನದಲ್ಲಿ ಒದಗಿಸಿದ್ದಾರೆ. ಅತಿಗೊನೆಯ ವ್ಯಕ್ತಿತ್ವವನ್ನೂ ಪರಿಚಯಿಸಿದ್ದಾರಲ್ಲದೆ, ಆ ನಾಟಕವನ್ನು ಕುರಿತು ವ್ಯಕ್ತವಾಗಿರುವ ಅಭಿಪ್ರಾಯಗಳನ್ನು ವಿಶ್ಲೇಷಿಸಿದ್ದಾರೆ.

ಗ್ರೀಕ್ ರುದ್ರನಾಟಕದ ಬೆಳವಣಿಗೆಯ ಮುಖ್ಯ ಘಟ್ಟಗಳನ್ನು ಈ ಲೇಖನಗಳಿಂದ ಗುರುತಿಸಿಕೊಳ್ಳಬಹುದು. ಅಲ್ಲಲ್ಲಿ ಚೆದುರಿದ್ದ ಈ ಲೇಖನಗಳೆಲ್ಲ ಹೀಗೆ ಒಂದೆಡೆ ಪ್ರಕಟವಾಗಿರುವುದು ಸ್ವಾಗತಾರ್ಹ. ಗ್ರೀಕ್ ರುದ್ರನಾಟಕಕ್ಕೆ ಸಂಬಂಧಿಸಿದಂಥ ಈ ಲೇಖನಗಳು ಕನ್ನಡದಲ್ಲಿ ಮಹತ್ವಪೂರ್ಣವಾಗಿವೆ.

'ಇತರ' ಶೀರ್ಷಿಕೆಯಲ್ಲಿ-ಗಾಂಧಿಯವರ ಬಿಡಾರದಲ್ಲಿ; ಕೆಲವು ಗಾದೆಗಳು; ಪುಳ್ಳಂಗಾಯುಂಡೆ; ಜ್ಯೋತಿಷ್ಯ ವೈಚಾರಿಕ ದೃಷ್ಟಿ; ತಾಯಿ-ಮಗು; ಶ್ರೀ ರಾಮಾನುಜಾಚಾರ್ಯರು; ಶಿಲಪ್ಪದಿಕಾರಂ-ಈ ಲೇಖನಗಳಿವೆ. ಗಾಂಧೀ-ಬಿಡಾರದಲ್ಲಿ ತಮಗಾದ ಅನುಭವಗಳನ್ನು ಸ್ವಾರಸ್ಯವಾಗಿ ನಿರೂಪಿಸಿದ್ದಾರೆ 'ಗಾಂಧೀ ಬಿಡಾರದಲ್ಲಿ'ಎಂಬ ಲೇಖನದಲ್ಲಿ. ಮಹಾತ್ಮರ ಸಾನಿಧ್ಯದಲ್ಲಿ ನಡೆಯುತ್ತಿದ್ದ ಬಗೆಯ ಚಟುವಟಿಕೆಗಳನ್ನು ಪರಿಚಯಿಸುವ ಈ ಲೇಖನ ಆಕರ್ಷಕವಾಗಿದ್ದು 'ಅನುಭವಗಳ ಗಟ್ಟಿ'ಯಾಗಿ ರೂಪುಗೊಂಡಿದೆ. ಎರೋಪ್ಯಾದ್ಯೋ





ಒಂದು ನಿರ್ದಿಷ್ಟ ಅರ್ಥದಲ್ಲಿ ಪ್ರಯೋಗವಾಗುತ್ತಿದ್ದ ಮಾತು ಕಾಲಕ್ರಮೇಣ ತಮ್ಮ ಮೊದಲಿನ ಅರ್ಥವನ್ನು ಕಳೆದುಕೊಂಡು, ಅರ್ಥವನ್ನು ಹೇಗೆ ಕೊಡುತ್ತವೆ-ಎಂಬುದನ್ನು ಕೆಲವು ಗಾದೆಗಳು ಲೇಖನ ಹೇಳಿದ್ದಾರೆ; ಗಾದೆಗಳನ್ನು ಅರ್ಥೈಸುವಲ್ಲಿಯೂ ವಹಿಸಬೇಕಾದ ಎಚ್ಚ ಯನ್ನು ಸೂಚಿಸಿದ್ದಾರೆ. ಪುಳ್ಳಿಂಗಾಯುಂಡೆ ಲೇಖನದಲ್ಲಿ ಈ ಹೆಸರಿನ ತ್ತಿಯನ್ನು ಆಕರ್ಷಕ ಪ್ರಬಂಧ ರೂಪದಲ್ಲಿ ಹೇಳಿದ್ದಾರೆ. ಶ್ರೀಕಂಠ ಸಮ ನೆಯಲ್ಲಿ ಆಚಾರ್ಯ ಶ್ರೀ ಅವರ ವ್ಯಕ್ತಿತ್ವದ ಸಮರ್ಥನೆ ಇದೆ. ಜ್ಯೋತಿಷ ವೈಚಾರಿಕ ದೃಷ್ಟಿ ಲೇಖನದಲ್ಲಿ ತಮ್ಮ ಜೀವನದಲ್ಲಿ ನಡೆದ ಹಲವು ಘ ಗಳನ್ನು ಹೇಳಿ, ಜ್ಯೋತಿಷ್ಯದಲ್ಲಿ ತಮಗಿರುವ ನಂಬಿಕೆಯನ್ನು ಪ್ರಕಟಿಸಿದ್ದಾ ತಾಯಿ-ಮಗು ಹೆಂಗರಳಿನ ಒಂದು ಚಿತ್ರ; ಮಾಸ್ತಿಯವರ ಮಾತಿನಲ್ಲಿ. ಆ ವಾಣಿಯಲ್ಲಿ ಮಾಡಿದ ಭಾಷಣ; 'ಶ್ರೀ ರಾಮಾನುಜಾಚಾರ್ಯರು' ಆಚಾ ವ್ಯಕ್ತಿತ್ವವನ್ನು ಕುರಿತದ್ದು; ತಮಿಳು ಸಾಹಿತ್ಯದಲ್ಲಿ ಗಣ್ಯಸ್ಥಾನಗಳಿಸಿರುವ ಪ್ಪದಿಕಾರಂನ್ನು ಕುರಿತ ಪರಿಚಯ ಇದೆ–'ಶಿಲಪ್ಪದಿಕಾರಂ' ಲೇಖನದಲ್ಲಿ

ಇಂಗ್ಲೀಷ್‌ನಲ್ಲಿ ಲೇಖಕರು ಬರೆದಿರುವ 'ಆದಿಕವಿ ಪಂಪ' 'ಸ್ಪ್ರ ಪಾರಂ ಇನ್ ಕನ್ನಡ', ಮುಂತಾದ ೧೦ ಲೇಖನಗಳು ಇಲ್ಲಿವೆ. ಇವೆಲ್ಲಾ ಯುಳ್ಳ ಬರಹಗಳಾಗಿವೆ.

'ನಂದಾ ನೆನಪು' ಹೆಸರಿನಲ್ಲಿ ತಮ್ಮ ಬದುಕಿನ 'ಹಿನ್ನೋಟ' ವೊಂದ ನೀಡಿದ್ದಾರೆ. ಕೆಲವು ನೆನಪುಗಳ ಟಿಪ್ಪಣಿಗಳಂತಿರುವ ಈ ಬರೆಹ ನವ ರಾಮರಾಯರ 'ಕೆಲವು ನೆನಪು'; ಮಾಸ್ತಿಯವರ 'ಭಾವ'-ಮುಂತಾ ಗಳ ಸಾಲಿಗೆ ಸೇರುವಂಥದು.

ಇಲ್ಲಿನ ನೆನಪುಗಳಲ್ಲಿ ಲೇಖಕರ ಮನೆತನದ ವಿಷಯ; ಬೆಳೆದ ಪರಿ ಮಹಾರಾಜ ಕಾಲೇಜು, ಸೆಂಟ್ರಲ್ ಕಾಲೇಜುಗಳಲ್ಲಿ ಮಾಡಿದ ವ್ಯಾಸ ಎನ್. ಶ್ರೀನಿವಾಸ ಅಯ್ಯಂಗಾರ್; ನರಸಿಂಹಶಾಸ್ತ್ರಿ; ಎ. ಆರ್. ಕೃಷ್ಣ ವೆಂಕಣ್ಣಯ್ಯ; ಬಿ ಎಂ ಶ್ರೀ ಮುಂತಾದ ಗುರುಗಳ ಸ್ಮರಣೆ; ಇಂ ಕನ್ನಡ ನಿಘಂಟು ಕಛೇರಿಯಲ್ಲಿ ಪ್ರಾರಂಭದ ಕೆಲಸ; ಅನಂತರ ನ ಅಧ್ಯಾಪಕ ವೃತ್ತಿ; ನಂಬಿದ ತತ್ವ; ಅದಕ್ಕನುಗುಣವಾಗಿ ಬದುಕನ್ನು ರ ಕೊಂಡ ರೀತಿ-ಈ ಮುಂತಾದ ಹಲವು ವಿವರಗಳು ಬರುತ್ತವೆ. ಜ

ವಾಲ್ಟನ್ ದಂಪತಿಗಳಿಂದ ಗ್ರೀಕ್ ಭಾಷೆಯನ್ನು ಕಲಿತದ್ದು; ಅನಂತರ ಹಲವು ಗ್ರೀಕ್ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದ್ದು; ಈ ಕೆಲಸ ಕೊನೆಯಾದಾಗ ವ್ಯವಸ್ಥೆ ಮಾಡಿದ್ದ ಗ್ರೀಕ್ ಭೋಜನದ ವೈಖರಿ; ತಮ್ಮ ಮೇಲೆ ಪ್ರಭಾವ ಬೀರಿದ ಸಿ. ಬಿ. ರಾಮರಾವ್, ಬೆಳ್ಳಾವೆ ವೆಂಕಟನಾರಣಪ್ಪ, ಮಂಜೇಶ್ವರ ಗೋವಿಂದ ಪೈ ಮುಂತಾದ ಹಲವು ಹಿರಿಯರ ಸ್ಮರಣೆ, ದೆಹಲಿ ವಿಶ್ವ ವಿದ್ಯಾಲಯದ ಕನ್ನಡ ಶಾಖೆಯಲ್ಲಿ ಸಲ್ಲಿಸಿದ ೧೦ ವರ್ಷಗಳ ಸೇವೆ; ಅನಂತರ ಕನ್ನಡ-ಕನ್ನಡ ನಿಘಂಟುವಿನ ಪ್ರಧಾನ ಸಂಪಾದಕರಾಗಿ ದುಡಿದಿದ್ದು-ಈ ಮುಂತಾದ ಹಲವು ಸ್ವಾರಸ್ಯಕರ ನೆನಪುಗಳೂ ಇಲ್ಲಿವೆ. ಆಕರ್ಷಕವಾದ ಆತ್ಮೀಯ ಶೈಲಿಯಲ್ಲಿ ಯಾವ ಮುಚ್ಚು ಮರೆಯೂ ಇಲ್ಲದೆ ತಮ್ಮ ಬದುಕನ್ನು ಕುರಿತ ತಮ್ಮ ಅನ್ನಿಸಿಕೆಗಳನ್ನು ಸ್ಪಷ್ಟವಾಗಿ ಖಚಿತವಾಗಿ ಹೇಳಿದ್ದಾರೆ. ಹೀಗಾಗಿ ಇಲ್ಲೆಲ್ಲಾ ಲೇಖಕರ ನಿಲುವು ನಂಬಿಕೆಗಳೂ ಸುಪ್ರಕಟವಾಗಿವೆ.

## ೩ 'ನಾಗರ ಮುರಿ'

### ತರಾಸು

ಪ್ರಸಿದ್ಧ ಕಾದಂಬರಿಕಾರರಾದ ತರಾಸು ಅವರು ಕಾದಂಬರಿಗಳ ಜತೆಗೆ ಸಣ್ಣ ಕತೆ, ನಾಟಕ, ವ್ಯಕ್ತಿಚಿತ್ರಗಳನ್ನು ಬರೆದಿರುವರಲ್ಲದೆ, ಹೊಸದಾಗಿ ಓದು ಕಲಿತ ವಯಸ್ಕರಿಗೆ ಉಪಯುಕ್ತವಾದ ಸಾಹಿತ್ಯವನ್ನು ರಚಿಸಿದ್ದಾರೆ. ಇಂಥ ಸಾಹಿತ್ಯದಲ್ಲಿ 'ನಾಗರಮುರಿ' ಎಂಬುದು 28 ಪುಟಗಳ ಒಂದು ಪುಟ್ಟ ಪುಸ್ತಕ; ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯಿಂದ ಪ್ರಕಟವಾಗಿದೆ.

'ನಾಗರಮುರಿ' ಒಂದು ಕತ್ತಿಯ ಹೆಸರು. ಅದು ಕೆಳದಿ ರಾಜಮನೆತನದ ಪೂರ್ವಿಕರಿಗೆ ದೊರೆತ ರೀತಿ, ಅದರ ಬಲದಿಂದ ಸಾಮಾನ್ಯ ರೈತ ಮನೆತನದವರಾಗಿದ್ದ ಅವರು ರಾಜ್ಯವನ್ನು ಕಟ್ಟಿ ಆಳಿದ್ದು, ಈ ಮನೆತನದ ದೊಡ್ಡ ಸಂಕಣ್ಣನಾಯಕ ದೆಹಲಿಯಲ್ಲಿ ಅಂಕುಶಖಾನ ಎಂಬ ಬಲಾಢ್ಯನನ್ನು ಸೋಲಿಸಿ, ಕರ್ನಾಟಕದ ಕೀರ್ತಿಯನ್ನು ಮೆರೆದಿದ್ದು ಈ ಪುಸ್ತಕದ ವಸ್ತು.

ಕರ್ನಾಟಕವನ್ನು ಆಳಿದ ಹೆಸರಾಂತ ಮನೆತನಗಳಲ್ಲಿ ಕೆಳದಿ ಮನೆತನವೂ ಒಂದು. ಪೂರ್ವದಲ್ಲಿ ಸಾಮಾನ್ಯ ಮನೆತನದವರಾಗಿದ್ದ ಇವರು ದೈವಭಕ್ತರೂ, ಕಷ್ಟಜೀವಿಗಳೂ ಆಗಿದ್ದರು. ಚೌಡಪ್ಪನಾಯಕರು ಕೆಳದಿ ಮನೆತನದ ಮೊದಲ ತಲೆ; ಕೆಳದಿ ಸಮೀಪದ 'ಹಳ್ಳಿಯ ಬಯಲು' ಇವರ ಮೂಲ ಸ್ಥಳ. ಎಂದಿನಂತೆ ಒಂದು ದಿನ ಚೌಡಪ್ಪ ನಾಯಕರು ಹೊತ್ತಿಗೆ ಮುಂಚೆ ಎದ್ದು, ಗದ್ದೆಯ ಕೆಲಸಕ್ಕೆ ಹೋದರು. ಮಧ್ಯಾಹ್ನದವರೆಗೂ ಒಂದೇಸಮನೆ ದುಡಿದು ದಣಿದ ಚೌಡಪ್ಪ ನಾಯಕರು ಗದ್ದೆಯ ಸಮೀಪದಲ್ಲಿಯೇ ಇದ್ದ ಮಾವಿನಮರದ ತಣ್ಣನೆಯ ನೆರಳಿನಲ್ಲಿ ವಿಶ್ರಮಿಸಿಕೊಳ್ಳಲೆಂದು ಮಲಗಿದವರು, ಚೆನ್ನಾಗಿ ನಿದ್ದೆ ಹೋದರು. ಗದ್ದೆ ಕೆಲಸಕ್ಕೆ ಹೋದ ಮಗ, ಮಧ್ಯಾಹ್ನವಾದರೂ ಮನೆಗೆ ಬರದಿದ್ದರಿಂದ ಚಿಂತೆಗೊಂಡ ತಾಯಿ ಬಸವಾಂಬೆ ಊಟ ಹೊತ್ತುಕೊಂಡು ಗದ್ದೆಯ ಬಳಿಗೆ ಹೋದಳು. ಮಾವಿನ ಮರದಡಿಯಲ್ಲಿ ಮಲಗಿದ್ದ ಮಗನನ್ನು ಕಂಡ ತಾಯಿಗೆ ಸಂತೋಷವಾಯಿತಾದರೂ, ಅವಳು ಕಂಡ ಇನ್ನೊಂದು ದೃಶ್ಯ ಅವಳ ಮೈ ನಡುಗಿಸಿತು. ಮರದಡಿ ಮಲಗಿದ್ದ ಮಗನ ತಲೆಯ ಸಮೀಪದಲ್ಲಿಯೇ ಘಟಸರ್ಪವೊಂದು ಹೆಡೆ ಬಿಚ್ಚಿಕೊಂಡು ಕುಳಿತಿದೆ. ಆಕೆಗೆ ಏನೂ ಮಾಡಲು ತೋಚದೆ, ಸುಮ್ಮನೆ ನಿಂತುಬಿಟ್ಟಳು. ಅಷ್ಟರಲ್ಲಿ ಆ ಘಟಸರ್ಪ ತನ್ನ ಹೆಡೆ ಮುಚ್ಚಿ, ಸ್ವಲ್ಪ ದೂರ ಹರಿದು ಹೋಯಿತು. ಕೂಡಲೆ ಬಸವಾಂಬೆ ಮಗನ ಬಳಿಗೆ ಹೋಗಿ ಅವನನ್ನು ಎಚ್ಚರಿಸಿ, ತಾನು ಕಂಡದ್ದನ್ನು ತಿಳಿಸಿದಳು. ಅದನ್ನು ಕೇಳಿ ಚೌಡಪ್ಪ ನಾಯಕರು ದಿಗಿಲುಗೊಂಡರು. ಸ್ವಲ್ಪ ದೂರ ಸರಿದು ಹೋದ ಹಾವು ಮುಂದಕ್ಕೆ ಹೋಗದೆ ಸಪ್ಪಳ ಮಾಡಿ ಅವರಿಬ್ಬರ ಗಮನವನ್ನು ತನ್ನೆಡೆಗೆ ಸೆಳೆದುಕೊಂಡು, ತನ್ನ ಹೆಡೆಯನ್ನು ಮೂರುನಾಲ್ಕು ಸಾರಿ ಗದ್ದೆಯ ಒಂದು ನಿರ್ಧಿಷ್ಟ ಸ್ಥಳದಲ್ಲಿ ಅಪ್ಪಳಿಸಿ ಮರೆಯಾಯಿತು. ಮನುಷ್ಯನನ್ನು ಕಂಡಕೂಡಲೆ ಕಡಿದು ಕೊಲ್ಲುವ, ಇಲ್ಲವೆ ಮಿಂಚಿನಂತೆ ಮರೆಯಾಗುವ ಸರ್ಪದ ಈ ವಿಚಿತ್ರ ವರ್ತನೆಯನ್ನು ಕಂಡು ತಾಯಿ-ಮಗ ಇಬ್ಬರೂ ಅಚ್ಚರಿಗೊಂಡರು; ಇದರಲ್ಲೇನೊ ರಹಸ್ಯವಿದೆ ಎಂದು ಭಾವಿಸಿಕೊಂಡರು. ಹಾವು ಗದ್ದೆಯಲ್ಲಿ ತೋರಿಸಿದ ಸ್ಥಳದಲ್ಲಿ ಗುರುತಿನ ಕಲ್ಲನ್ನು ಇಟ್ಟು, ಅವರಿಬ್ಬರೂ ಮನೆಗೆ ಹೋದರು. ಮಾರನೆಯ ದಿನ ಚೌಡಪ್ಪ

ನಾಯಕರು ಆ ಗುರುತಿನ ಸ್ಥಳವನ್ನು ತೋಡಿಸಿ ನೋಡಿದಾಗ, ಸಂಪತ್ತು ತುಂಬಿ ತುಳುಕುತ್ತಿದ್ದ ಒಂದು ದೊಡ್ಡ ಕಬ್ಬಿಣದ ಕೊಪ್ಪರಿಗೆಯನ್ನು ಅದರಲ್ಲಿ ಮಿಂಚಿನಂತೆ ಹೊಳೆಯುತ್ತಿದ್ದ ಹರಿತವಾದ ಒಂದು ಕತ್ತಿಯನ್ನೂ ಕಂಡರು. ಸರ್ಪದ ಕಾರಣದಿಂದ ಸಿಕ್ಕಿದ ಆ ಕತ್ತಿಗೆ 'ನಾಗರಮುರಿ' ಎಂದೇ ಹೆಸರಿಟ್ಟರು. ಆ ಸಂಪತ್ತಿನ ಸಹಾಯದಿಂದ ಮತ್ತು ಕತ್ತಿಯ ಬಲದಿಂದ ಕೆಳದಿಯ ಆ ರೈತರು ಸಾಮ್ರಾಜ್ಯವೊಂದನ್ನು ಕಟ್ಟಿ ಆಳಲು ಸಾಧ್ಯ ವಾಯಿತು. ಆ ಕತ್ತಿ ಕೆಳದಿ ಮನೆತನದ 'ರಕ್ಷಾದೇವತೆ' ಯಾಯಿತು. ಮುಂದೆ, ಆ ಮನೆತನದಲ್ಲಿ ಪ್ರಸಿದ್ಧನಾದ ದೊಡ್ಡ ಸಂಕಣ್ಣನಾಯಕನೂ ಅನೇಕ ಶತ್ರುಗಳನ್ನು ಎದುರಿಸಿ ಕೆಳದಿಯನ್ನು ಅನೇಕ ವರ್ಷಗಳ ಕಾಲ ಆಳಿದ್ದು ಆ ಕತ್ತಿಯ ಬಲದಿಂದಲೇ! ದೊಡ್ಡ ಸಂಕಣ್ಣ ನಾಯಕರಿಗೆ ವಯಸ್ಸಾದಂತೆ ರಾಜ್ಯಾಡಳಿತದಲ್ಲಿ ಆಸಕ್ತಿ ಹಿಂಗಿತು, ದೇವರಕಡೆ ಮನಸ್ಸು ತಿರುಗಿತು ಪುಣ್ಯ ಕ್ಷೇತ್ರಗಳ ದರ್ಶನಕ್ಕೆ ಅವರ ಮನಸ್ಸು ಹಾತೊರೆ ಯಿತು. ತಮ್ಮ ಇಚ್ಛೆಯನ್ನು ಸಹೋದರ ಚಿಕ್ಕಸಂಕಣ್ಣ ನಾಯಕರಿಗೆ ತಿಳಿಸಿ, ರಾಜ್ಯಾಡಳಿತವನ್ನು ಅವರಿಗೆ ವಹಿಸಿ, ಅರಮನೆ ಮತ್ತು ರಾಜ್ಯದ ಜನತೆಯ ಅಸಮ್ಮತಿಯನ್ನು ನಯವಾಗಿ ನಿವಾರಿಸಿಕೊಂಡು, ನಾಗರಮುರಿ ಯನ್ನು ಸೊಂಟದಲ್ಲಿ ಭದ್ರಪಡಿಸಿಕೊಂಡು, ಕಷಾಯಧಾರಿಗಳಾಗಿ, ನಾಲ್ವರು ಅಪ್ತ ಸಹಾಯಕರೊಂದಿಗೆ ದೇಶಸಂಚಾರಕ್ಕೆ ಹೊರಟರು.

ಆಡಳಿತದ ಜವಾಬ್ದಾರಿಯಿಂದ ಮುಕ್ತಗೊಂಡು, ಶಾಂತಿಯನ್ನು ಅರಸುತ್ತ ಹೊರಟ ದೊಡ್ಡಸಂಕಣ್ಣ ನಾಯಕರು—ಶಿವಗಂಗೆ, ಕಂಚಿ, ಚಿದಂಬರಂ, ಕುಂಭಕೋಣ, ರಾಮೇಶ್ವರ ಮುಂತಾದ ಅನೇಕ ತೀರ್ಥ ಕ್ಷೇತ್ರ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ, ವಿಜಯಪುರ, ಅಹ್ಮದ್‌ನಗರ ಮುಂತಾದ ದೊಡ್ಡನಗರಗಳನ್ನು ನೋಡಿ ಕೊಂಡು ದೆಹಲಿಗೆ ಹೋದರು. ಅಲ್ಲಿ ಅವರಿಗೊಂದು 'ಸವಾಲು' ಕಾದಿತ್ತು!

ಆಗ್ಗೆ ದೆಹಲಿಯನ್ನು ಆಳುತ್ತಿದ್ದ ಬಾದಷಹನಿಗೆ ಅಂಕುಶಖಾನ ಎಂಬ ಒಬ್ಬ ವಜೀರ ಇದ್ದ. ಅವನು ಬಹಳ ಪರಾಕ್ರಮಶಾಲಿ. 'ಒಂಟಿ ಗತ್ತಿಯ ಯುದ್ಧ'ದಲ್ಲಿ ಅವನನ್ನು ಗೆದ್ದವರು ಯಾರೂ ಆ ಪ್ರಾಂತ್ಯದಲ್ಲಿ ಇರಲಿಲ್ಲ. ಅದರಿಂದ ಕೊಬ್ಬಿದ್ದ ಅಂಕುಶಖಾನ ಅರಮನೆಯ ರಾಜದ್ವಾರದ

ಮುಂದೆ ಒಂದು ಕತ್ತಿಯನ್ನು ಕಟ್ಟಿಸಿ, 'ತನ್ನನ್ನು ಯುದ್ಧದಲ್ಲಿ ಎದುರಿಸು ವರು ಯಾರಾದರೂ ಇದ್ದರೆ, ಅಂಥವರು ಈ ಕತ್ತಿಯನ್ನು ಕೆಳಗಿಳಿಸಲಿ ಇಲ್ಲದಿದ್ದರೆ ಕತ್ತಿಯ ಕೆಳಗೆ ತಲೆಬಾಗಿ ನಡೆಯಲಿ' ಎಂಬುದಾಗಿ ಪ್ರಕಟಿ ಸಿದ್ದ. ಇದನ್ನು ತನ್ನ ಸಹಾಯಕರಿಂದ ಕೇಳಿದ ದೊಡ್ಡಸಂಕಣ್ಣ ನಾಯ ಕರಿಗೆ ಈ ಪ್ರಾಂತ್ಯದಲ್ಲಿ ಇವನನ್ನು ಎದುರಿಸುವರು ಯಾರೂ ಇಲ್ಲವೇ? ಎಂದು ಆಶ್ಚರ್ಯವಾಯಿತಲ್ಲದೆ, ಅವರಲ್ಲಿ ಸಹಜವಾಗಿಯೇ ಇದ್ದ, ಕಷಾಯ ವೇಷದಲ್ಲಿ ಮರೆಯಾಗಿದ್ದ ಪೌರುಷವೂ ಜಾಗೃತವಾಯಿತು. ತಾವು ಆ ಕತ್ತಿಯ ಕೆಳಗೆ ತಲೆಬಾಗಿಸಿ ನಡೆದು ಹೋದರೆ, ಅದು ತಮಗೆ ಮಾತ್ರವಲ್ಲ, ಇಡೀ ಕನ್ನಡ ನಾಡಿಗೇ ಅಪಮಾನ ಎಂದು ಭಾವಿಸಿದ ಅವರು, ಕತ್ತಿಯನ್ನು ಕೆಳಗಿಳಿಸುವಂತೆ ದ್ವಾರಪಾಲಕರಿಗೆ ತಿಳಿಸಲು. ತಮ್ಮ ಸಹಾಯಕರಿಗೆ ಹೇಳಿದರು. ದ್ವಾರಪಾಲಕರು ಅನುಮಾನದಿಂದಲೇ ಕತ್ತಿ ಯನ್ನು ಕೆಳಗಿಳಿಸಿದರು. ಕಷಾಯದಾರಿಯೊಬ್ಬ ಕತ್ತಿ ಇಳಿಸಿ, ಅಂಕುಶ ಖಾನನೊಡನೆ ಯುದ್ಧಕ್ಕೆ ಸಿದ್ಧನಿರುವ ವಿಷಯ ದೆಹಲಿಯಲ್ಲಿ ದೊಡ್ಡ ಸುದ್ದಿಯಾಯಿತು. ಅದು ಬಾದಷಹನಿಗೂ ತಿಳಿಯಿತು. ಅವನು ಕುತೂ ಹಲದಿಂದ, ಜಂಗಮವೇಷದಲ್ಲಿದ್ದ ದೊಡ್ಡಸಂಕಣ್ಣ ನಾಯಕರನ್ನು ಅರ ಮನೆಗೆ ಕರೆಸಿಕೊಂಡು, ಅವರ ಪರಿಚಯ ತಿಳಿಸುವಂತೆ ಕೇಳಿದ. ಆ 'ಜಂಗಮದಾರಿ' ದೊಡ್ಡಸಂಕಣ್ಣನಾಯಕರು ತಾವು 'ಕರ್ನಾಟಕ' ದವರೆಂದು ಮಾತ್ರ ತಿಳಿಸಿ, ಹೆಚ್ಚಿನ ಪರಿಚಯ ತಕ್ಕ ಸಮಯದಲ್ಲಿ ತಿಳಿಸ ತ್ತೇವೆಂದು ಹೇಳಿ, ಬಾದಷಹ ಒದಗಿಸಿದ್ದ ಅತಿಥಿಗೃಹಕ್ಕೆ ವಿಶ್ರಾಂತಿಗೆ ತೆರಳಿದರು.

ಅಂದೇ ಮಧ್ಯಾಹ್ನ ಅರಮನೆಯ ಹೊರಬಯಲಿನಲ್ಲಿ 'ಒಂಟಿಗತ್ತಿಯ ಯುದ್ಧ'ಕ್ಕೆ ಎಲ್ಲವೂ ಸಿದ್ಧವಾಯಿತು. ಬಾದಷಹ ತನ್ನ ಪರಿವಾರ ಸಮೇತ ಅಲ್ಲಿಗೆ ಬಂದ. ಮದಿಸಿ ಮತ್ತನಾಗಿದ್ದ ಅಂಕುಶಖಾನನೂ ಠೀವಿಯಿಂದ ಬಂದ. ಅರಮನೆಯ ಅತಿಥಿಗೃಹದಲ್ಲಿ ಪೂಜೆ, ಭೋಜನ, ವಿಶ್ರಾಂತಿಯನ್ನು ಮುಗಿಸಿಕೊಂಡು ತಮ್ಮ ಸೇವಕರೊಂದಿಗೆ ನಾಯಕರೂ ಬಂದರು. ಬಾದಷಹ ಇಬ್ಬರನ್ನೂ ಪರಸ್ಪರ ಪರಿಚಯಿಸಿ, ಬರಿಗೈಯಲ್ಲಿ ಬಂದಿದ್ದ ನಾಯಕರಿಗೆ ಒಂದು ಕತ್ತಿಯನ್ನು ತರಿಸಿಕೊಟ್ಟು, ಯುದ್ಧವನ್ನು ಆರಂಭಿಸಲು ಸೂಚಿಸಿ

ದರು. ಚೌಡಪ್ಪ ನಾಯಕರು ಕತ್ತಿಯನ್ನು ಕೈಗೆತ್ತಿಕೊಂಡು ಒಂದು ಸಾರಿ ಝಳಪಿಸಿದರು; ಅದು ಎರಡು ತುಂಡಾಯಿತು. ಬಾದಷಹ ಮತ್ತೊಂದು ಕತ್ತಿಯನ್ನು ತರಿಸಿಕೊಟ್ಟರು; ಅದು ಹಾಗೆಯೇ ಆಯಿತು. ಹೀಗೆ ತರಿಸಿ ಕೊಟ್ಟ ನಾಲ್ಕಾರು ಕತ್ತಿಗಳೂ ಮುರಿದುಹೋದುವು. ಕೊನೆಗೆ ಬಾದಷಹ ತಮ್ಮ ಸೊಂಟದಲ್ಲಿದ್ದ ಪಟ್ಟದಕತ್ತಿಯನ್ನೇ ಕೊಡಲು ಮುಂದಾದರು. ಆಗ ನಾಯಕರು, 'ಅದು ಪಟ್ಟದ ಕತ್ತಿ, ಅದು ನಿಮ್ಮಲ್ಲಿಯೇ ಇರಲಿ; ನನ್ನಲ್ಲಿ ಶಿವ ಕೊಟ್ಟ ಕತ್ತಿ ಇದೆ' ಎಂದು ಹೇಳಿ ತಮ್ಮ ಸೊಂಟಕ್ಕೆ ಒಡ್ಯಾಣದಂತೆ ಕಟ್ಟಿಕೊಂಡಿದ್ದ 'ನಾಗರಮುರಿ' ಕತ್ತಿಯನ್ನು ಹೊರಕ್ಕೆ ತೆಗೆದು ಒಂದು ಸಾರಿ ಝಳಪಿಸಿ ಯುದ್ಧಕ್ಕೆ ಸಿದ್ಧರಾದರು. ಕೂಡಲೇ ಯುದ್ಧ ಪ್ರಾರಂಭ ವಾಯಿತು. ಅಂಕುಶಖಾನ ಚತುರ, ಯುದ್ಧವೀರ. ಚೌಡಪ್ಪ ನಾಯಕರೂ ಯುದ್ಧ ಶೂರರು ನೆರೆದಿದ್ದ ಜನಸ್ತೋಮ ಕಾತರ ಕುತೂಹಲದಿಂದ ಆ ಯುದ್ಧವನ್ನು ವೀಕ್ಷಿಸುತ್ತಿತ್ತು. ವೀರನಾದ ಅಂಕುಶಖಾನನಿಂದ ಈ ಜಂಗಮ ದಾರಿಗೆ ಸೋಲು ಖಚಿತ ಎಂದೇ ಜನಸ್ತೋಮ ಭಾವಿಸಿತ್ತು. ನೋಡು ನೋಡುತ್ತಿದ್ದಂತೆ ಯುದ್ಧ ಬಿರುಸಾಯಿತು. ಇಬ್ಬರೂ ಸಮಸಮವಾಗಿ ಕಾದಾಡುತ್ತಿದ್ದರು ಯುದ್ಧದ ಚಮತ್ಕಾರಗಳನ್ನು ತಿಳಿದಿದ್ದ ನಾಯಕರು, ಸಮಯ ನೋಡಿ, ಎದುರಾಳಿಯ ನಡುವಿಗೆ ಗುರಿಯಿಟ್ಟು 'ನಾಗರಮುರಿ' ಕತ್ತಿಯನ್ನು ರಭಸದಿಂದ ಬೀಸಿದರು. ಅದರ ಹರಿತಕ್ಕೆ ಅಂಕುಶಖಾನನ ಕತ್ತರಿಸಿದ ನಡು ದೇಹದಿಂದ ಉರುಳದೆ ಹಾಗೆಯೇ ನಿಂತಿತು!. ಸಂಕಣ್ಣ ನಾಯಕರು ಕತ್ತಿಯನ್ನು ಪಕ್ಕಕ್ಕೆ ಇಟ್ಟು, ವಿಶ್ರಮಿಸಿಕೊಳ್ಳಲಾರಂಭಿಸಿದರು. ಅದನ್ನು ಕಂಡ ಬಾದಷಹ 'ಇದೇನು ಸಾಕಾಯಿತೇ'? ಎಂದು ಕೇಳಿದ. ಆಗ ಸಂಕಣ್ಣನಾಯಕ 'ಯುದ್ಧ ಮುಗಿಯಿತು' ಎಂದು ಹೇಳಿ, ಕತ್ತಿಯಿಂದ ಅಂಕುಶಖಾನನ ದೇಹವನ್ನು ತಳ್ಳಿದರು; ಅದು ಎರಡು ಹೋಳಾಗಿ ಕೆಳಗುರು ಳಿತು. ಅದನ್ನು ಕಂಡ ಬಾದಷಹ ಮತ್ತು ಜನಸ್ತೋಮ ಆಶ್ಚರ್ಯಪಟ್ಟಿತು. ಯಾರಿಗೂ ಬಗ್ಗದೆ ಕೆಚ್ಚಿನಿಂದ ಮೆರೆಯುತ್ತಿದ್ದ ಅಂಕುಶಖಾನ ಒಬ್ಬ ಸಾಮಾನ್ಯ 'ಜಂಗಮದಾರಿಗೆ' ಸೋತು, ಸತ್ತಿದ್ದು ದೆಹಲಿಯಲ್ಲಿ ದೊಡ್ಡ ಸುದ್ದಿಯಾಯಿತು.

'ಜಂಗಮದಾರಿಯ' ಪರಾಕ್ರಮವನ್ನು ಕಣ್ಣಾರೆ ಕಂಡ ಬಾದಷಹ

‘ಇವನು ನಿಜವಾದ ಸನ್ಯಾಸಿಯಲ್ಲ, ಇವನೊಬ್ಬ ವೀರನೇ ಇರಬೇಕು’ ಎಂದು ಭಾವಿಸಿದ. ಮಾರನೆಯ ದಿನ ಅವರನ್ನು ತನ್ನ ಅರಮನೆಗೆ ಆಹ್ವಾನಿಸಿ, ಯುದ್ಧದಲ್ಲಿ ಗೆದ್ದಿದ್ದಕ್ಕೆ ತನ್ನ ಸಂತೋಷವನ್ನು ಸೂಚಿಸಿ, ಅಮೂಲ್ಯ ರತ್ನಾಭರಣಗಳನ್ನು ಕಾಣಿಕೆಯಾಗಿ ಕೊಟ್ಟು ಸತ್ಕರಿಸಿದ.

ದೊಡ್ಡ ಸಂಕಣ್ಣ ನಾಯಕರು ಬಾದಷಹನಿಗೆ ತಮ್ಮ ನಿಜವೃತ್ತಾಂತವನ್ನು ತಿಳಿಸಿ, ತಮ್ಮ ಸ್ನೇಹದ ಜ್ಞಾಪಕಕ್ಕಾಗಿ ರಾಜ್ಯದ ಪುಣ್ಯಕ್ಷೇತ್ರಗಳಲ್ಲಿ ದೇವರಪೂಜೆ ಮತ್ತು ಯಾತ್ರಿಕರಿಗೆ ಅನುಕೂಲಗಳನ್ನು ಕಲ್ಪಿಸುವಂತೆ ಹೇಳಿ, ಬಾದಷಹ ತಮಗೆ ನೀಡಿದ್ದ ರತ್ನಾಭರಣಗಳನ್ನು ಅವರಿಗೆ ಹಿಂತಿರುಗಿಸಿದರು. ಜಂಗಮ ವೇಷದಲ್ಲಿದ್ದವರು ಕರ್ನಾಟಕದವರೆಂದು, ಕೆಳದಿಯ ವಂಶದ ರಾಜರೆಂದು ತಿಳಿದು, ಬಾದ್‌ಷಹ ಬಹಳ ಸಂತೋಷಪಟ್ಟರಲ್ಲದೆ, ಅವರ ಅಪೇಕ್ಷೆಯಂತೆ ತೀರ್ಥಕ್ಷೇತ್ರಗಳಲ್ಲಿ ಅನುಕೂಲಗಳನ್ನು ಕಲ್ಪಿಸಿ ಕೊಡುವುದಾಗಿ ಭರವಸೆ ನೀಡಿದರು. ದೊರೆಯಿಂದ ಬೀಳ್ಕೊಂಡ ದೊಡ್ಡ ಸಂಕಣ್ಣ ನಾಯಕರು ತಮ್ಮ ಪ್ರವಾಸವನ್ನು ಮುಂದುವರಿಸಿದರು.

ಹೀಗೆ ಕನ್ನಡ ನಾಡಿನ ವೀರನೊಬ್ಬ ದೆಹಲಿ ಸುಲ್ತಾನನ ರಾಜ್ಯಾಡಳಿತದಲ್ಲಿ, ಎದುರಾದ ಅಪಮಾನವನ್ನು ಸಹಿಸದೆ, ಎದುರಿಸಿ ಗೆದ್ದಿದ್ದು, ಆ ಮೂಲಕ ಕರ್ನಾಟಕದ ಕೀರ್ತಿಯನ್ನು ಎತ್ತಿ ಹಿಡಿದಿದ್ದು ಐತಿಹಾಸಿಕವಾಗಿಯೂ ಮಹತ್ವದ ಸಂಗತಿಯಾಗಿದೆ. ಇಂಥದೊಂದು ‘ಐತಿಹಾಸಿಕ ಸಂಗತಿ’ಯನ್ನು ತರಾಸು ಅವರು ಸರಳವಾದ ಆಕರ್ಷಕ ಶೈಲಿಯಲ್ಲಿ ಓದಬಲ್ಲ ವಯಸ್ಕರಿಗೆ ಆತ್ಮೀಯವಾಗಿ ಈ ಪುಸ್ತಕದಲ್ಲಿ ಪರಿಚಯಿಸಿದ್ದಾರೆ. ಚುರುಕು ಸಂಭಾಷಣೆ, ಕಾತರ, ಕುತೂಹಲಗಳಿಂದ ಕೂಡಿದ ಆಕರ್ಷಕ ನಿರೂಪಣೆ ಈ ಪುಸ್ತಕದ ಹೃದಯ ಗುಣಗಳು.

## ೮ ‘ಜ್ಞಾನ ಗಂಗೋತ್ರಿ’

**ನಿರಂಜನ (ಸಂಪಾದಕ)**

ಶಿವರಾಮ ಕಾರಂತರ ಪ್ರಯತ್ನ ಮತ್ತು ದುಡಿಮೆಗಳಿಂದ ಕನ್ನಡದಲ್ಲಿ ಮೊಟ್ಟಮೊದಲಿಗೆ ‘ಬಾಲಪ್ರಪಂಚ’ ಪ್ರಕಟವಾಯಿತು. ಒಂದು ಸರ

ಕಾರವೋ ವಿಶ್ವವಿದ್ಯಾನಿಲಯವೋ ಮಾಡಬೇಕಾದ ಕಾರ್ಯವನ್ನು ಒಬ್ಬ ವ್ಯಕ್ತಿಯೇ 'ಸಂಸ್ಥೆ'ಯಾಗಿ ದುಡಿದು, 'ಸೈ' ಎನಿಸಿಕೊಂಡರು. ಪ್ರೌಢರ 'ವಿಶ್ವಕೋಶ'ಗಳ ಬಗ್ಗೆ ಯಾರೂ ಯೋಚಿಸಲಿಲ್ಲ!

ಆದರೆ ನಾಡಿನ ಪುಣ್ಯ, ರಾಷ್ಟ್ರಕವಿ ಕುವೆಂಪು ಮತ್ತು ಕನ್ನಡದ ಕಟ್ಟಾಳು ದೇಜಗೌ ಅವರುಗಳ ಪ್ರಯತ್ನ ಮತ್ತು ಸರ್ಕಾರದ ಉದಾರ ನೆರವು-ಇವುಗಳಿಂದಾಗಿ, ಇದೀಗ 'ಕನ್ನಡ ವಿಶ್ವಕೋಶ' ಸಂಪುಟಗಳು ಪ್ರಕಟವಾಗುತ್ತಿವೆ.

ಒಂದು ನಾಡಿನ ಭವಿಷ್ಯ, ಆ ನಾಡಿನ ಯುವಕ ಶಕ್ತಿಯನ್ನು ಅವಲಂಬಿಸಿದೆ. ಏಕೆಂದರೆ ಯುವ ಜನಾಂಗದ ಶಕ್ತಿಯೇ ರಾಷ್ಟ್ರದ ಶಕ್ತಿ. ಈ ಶಕ್ತಿ ಹೆಚ್ಚುವುದು 'ಜ್ಞಾನ ಸಂಗ್ರಹ'ದಿಂದ. ಆದ್ದರಿಂದ ಮಕ್ಕಳಿಗೆ ಮೊದಲಿನಿಂದಲೂ, ವಿಶ್ವದ ವಿವಿಧ ವಿಷಯಗಳನ್ನು ಪರಿಚಯ ಮಾಡಿಕೊಡಬೇಕು. ಇದೇನು? ಇದೇಕೆ? ಎಂಬ ಅವರ ನೂರಾರು ಪ್ರಶ್ನೆಗಳಿಗೆ ತಾಳ್ಮೆಯಿಂದ ಉತ್ತರಿಸಬೇಕು. ಇದು ನಿಜವಾಗಿ ಆಗಬೇಕಾದ ಕಾರ್ಯವೇ. ಆದರೆ ಹೇಗೆ? ಎಂಬ ಸಮಸ್ಯೆ ಎದುರಾಗುತ್ತದೆ.

ಇಂಥ ಸಮಸ್ಯೆಯನ್ನು ಮುಂದಿರಿಸಿಕೊಂಡು, ಚಿಂತಿಸಿ, ಪರಿಹಾರ ಕಂಡುಹಿಡಿದ ಕೀರ್ತಿ ನಿರಂಜನರಿಗೆ ಸಲ್ಲಬೇಕು. ನಿರಂಜನರು ಕನ್ನಡದ ಪ್ರತಿಭಾವಂತ ಬರಹಗಾರರಲ್ಲಿ ಒಬ್ಬರು. ಕಥೆಗಾರರಾಗಿ, ಕಾದಂಬರಿಕಾರರಾಗಿ, ನಾಟಕಕಾರರಾಗಿ ಅವರು ನಾಡಿಗೆ ಚಿರಪರಿಚಿತರಾಗಿದ್ದಾರೆ.

ಬಹುಶಃ ನಿರಂಜನರು ಕಾರಂತರ 'ಬಾಲಪ್ರಪಂಚವನ್ನು' ಜ್ಞಾಪಕದಲ್ಲಿಟ್ಟುಕೊಂಡು 'ಕನ್ನಡ ವಿಶ್ವಕೋಶ'ದ ಪ್ರಕಟಣೆಯಿಂದ ಸ್ಫೂರ್ತಿ ಹೊಂದಿ, ಈ ಮಾರ್ಗದಲ್ಲಿಯೇ ನಮ್ಮ ನಾಡಿನ ಕಿರಿಯರಿಗೆ ಏನಾದರೂ ಮಾಡಲು ಸಾಧ್ಯವೆ ಎಂದು ಚಿಂತಿಸಿದರು. ಕನ್ನಡದ ಕೆಲಸಕ್ಕೆ ಸದಾಸಿದ್ಧರಾಗಿರುವ ಪ್ರಾಚಾರ್ಯ ದೇಜಗೌ ಅವರು ಬೆಂಬಲಕೊಟ್ಟರು. ಸರಕಾರ ತನ್ನ ಪಾಲಿನ ಕರ್ತವ್ಯವನ್ನು ನಿರ್ವಹಿಸಲು ಒಪ್ಪಿತು. ಈ 'ತ್ರಿವೇಣಿ ಸಂಗಮದ' ಫಲವೇ 'ಜ್ಞಾನಗಂಗೋತ್ರಿಯ' ಉದಯ, ಕಿರಿಯರಜ್ಞಾನ ದಾಹವನ್ನು ಪೂರೈಸಲು ಜನಿಸಿದ ಜ್ಞಾನವಾಹಿನಿ!.

'ಜ್ಞಾನಗಂಗೋತ್ರಿ' ಏಳು ಸಂಪುಟಗಳಲ್ಲಿ ಪ್ರಕಟವಾಗಲಿದೆ. (ಈ ಏಳು ಸಂಪುಟಗಳು ಪ್ರಕಟ ಆಗಿವೆ) ಕ್ರಮವಾಗಿ, ಮನುಕುಲದ

ಕಥೆ, ಜೀವವಿಜ್ಞಾನ, ಭೌತವಿಜ್ಞಾನ, ತಾಂತ್ರಿಕ ವಿಜ್ಞಾನ, ಕಲೆ ಸಾಹಿತ್ಯ, ಕ್ರೀಡೆ, ಮನೋವಿಲಾಸ, ಭಾರತದ ಕಥೆ. ಹೀಗೆ 'ಮನುಕುಲದ ಕಥೆ'ಯಿಂದ ಆರಂಭಿಸಿ, 'ಭಾರತದ ಕಥೆ'ಯೊಂದಿಗೆ ಮುಕ್ತಾಯವಾಗುತ್ತದೆ.

ಸುಮಾರು ೧೦-೧೮ ವರ್ಷ ವಯಸ್ಸಿನ ವಿದ್ಯಾರ್ಥಿಗಳನ್ನು ಗಮನದಲ್ಲಿಟ್ಟುಕೊಂಡು, ಸರಳವೂ ಆಕರ್ಷಕವೂ ಆದ ಲೇಖನಗಳಿಂದ, ಚಿತ್ರ ಮತ್ತು ನಕ್ಷೆಗಳಿಂದ ಕೂಡಿ ಇದೀಗ ಸುಂದರವಾಗಿ ಪ್ರಕಟವಾಗಿದೆ 'ಜ್ಞಾನ ಗಂಗೋತ್ರಿ'ಯ ಪ್ರಥಮ ಸಂಪುಟ 'ಮನುಕುಲದ ಕಥೆ'. ಈ ಜಗತ್ತೇನು? ಈ ವಸ್ತು ಇಲ್ಲಿ ಏಕೆ? ಏಗೆ? ಎತ್ತ? ಮೊದಲಾದ ಕಿರಿಯರ ನೂರೆಂಟು ಪ್ರಶ್ನೆಗಳಿಗೆ ಇಲ್ಲಿ ಉತ್ತರ ಇದೆ. ಗವಿ ಮಾನವನಿಂದ ಹಿಡಿದು, ಗಗನ ಯಾತ್ರಿಯವರೆಗೆ ಆಗಿರುವ ಸಾಧನೆ ಮತ್ತು ಸಾಹಸಗಳನ್ನು ಚಿತ್ತಾಕರ್ಷಕವಾಗಿ, ಸಚಿತ್ರವಾಗಿ, ಸರಳವಾಗಿ ಚಿತ್ರಿಸಲಾಗಿದೆ. ಜಗತ್ತಿನ ವಿವಿಧ ರಾಷ್ಟ್ರ ಮತ್ತು ದೇಶಗಳ ಭೌಗೋಳಿಕ ಮತ್ತು ಚಾರಿತ್ರಿಕ ವಿಷಯಗಳನ್ನು ಸೂಕ್ತವಾದ ನಕ್ಷೆಗಳೊಂದಿಗೆ ಪ್ರಕಟಿಸಿರುವುದೂ ಈ ಸಂಪುಟದ ಮತ್ತೊಂದು ವೈಶಿಷ್ಟ್ಯ. ಇಷ್ಟೇ ಅಲ್ಲದೇ, ಸಂದರ್ಭ ಸೂಚಿಗಳೂ, ಶಬ್ದಕೋಶ ಮೊದಲಾದ ವಿಷಯಗಳೂ ಸೇರಿರುವುದರಿಂದ ಸಂಪುಟದ ಹಿರಿಮೆ ಮತ್ತು ಗರಿಮೆಗಳು ವ್ಯಕ್ತವಾಗುತ್ತದೆ. ಸುಂದರವಾದ ಮುದ್ರಣ ಮತ್ತು ಅಂದವಾದ ಹೊದಿಕೆ ಈ ಸಂಪುಟದ ಇನ್ನೊಂದು ವೈಶಿಷ್ಟ್ಯ. ಹೀಗೆ ಹಲವು 'ಅಗ್ಗಳಿಕೆಗಳ' 'ಆಗರ'ವಾಗಿದೆ 'ಮನುಕುಲದ ಕಥೆ'. ಪ್ರಧಾನ ಸಂಪಾದಕ ನಿರಂಜನ ಮತ್ತು ಸಂಪಾದಕ ಮಂಡಲಿ ಸದಸ್ಯರ ದುಡಿಮೆ ಸಾರ್ಥಕವಾಗಿದೆ.

ಕನ್ನಡ ನಾಡಿನ ಮಕ್ಕಳಿಗೆ ಇಂಥ ಒಂದು 'ಕೊಡುಗೆ'ಯನ್ನು ಉದಾರವಾಗಿ ಕೊಟ್ಟ ಸರಕಾರ ಮತ್ತು ಸಂಪಾದಕ ಮಂಡಲಿ ಅಭಿನಂದನೆಗೆ ಪಾತ್ರವಾಗಿದೆ.

## ೫ 'ವಿಜ್ಞಾನಚರಣಸಂಪನ್ನ ಗೋತಮ ಬುದ್ಧ'

### ಎಚ್. ವಿ. ಶ್ರೀರಂಗರಾಜು

ಭಗವಾನ್ ಬುದ್ಧದೇವನನ್ನು ಕುರಿತು ಎಚ್. ವಿ. ಶ್ರೀರಂಗರಾಜು ಅವರು ಬರೆದಿರುವ ಜೀವನ ಚರಿತ್ರೆ ಇದು. ಪಾಲಿ ಗ್ರಂಥಗಳನ್ನು ಆಧರಿಸಿ

ಕೊಂಡು ಧರ್ಮಾನಂದ ಕೋಸಂಬಿಯವರು ಬರೆದಿರುವ ‘ಭಗವಾನ್ ಬುದ್ಧ’ಪುಸ್ತಕದಿಂದ ತಾವು ಸಹಾಯ ಪಡೆದಿರುವುದಾಗಿ ಲೇಖಕರು ತಮ್ಮ ‘ಬಿನ್ನಹ’ ದಲ್ಲಿ ಹೇಳಿಕೊಂಡಿದ್ದಾರೆ. ಪಾಲಿ ಗ್ರಂಥಗಳಲ್ಲಿ ಬುದ್ಧನ ಬಗ್ಗೆ ದೊರೆಯುವ ಸಂಗತಿಗಳು ಹೆಚ್ಚು ಖಚಿತವಾದುವು ಎಂದು ನಂಬಲಾಗಿದೆ. ಹೀಗಾಗಿ ಶ್ರೀರಂಗರಾಜು ಅವರ ಮೂಲ ಸಾಮಾಗ್ರಿ ಖಚಿತವಾದುದು ಎಂಬುದು ಸ್ಪಷ್ಟ. ಒಟ್ಟು ಏಳು ಅಧ್ಯಾಯಗಳಲ್ಲಿ ಬುದ್ಧನ ಜೀವನ ಮತ್ತು ಬೋಧನೆಯನ್ನು ಲೇಖಕರು ವಿವರಿಸಿದ್ದಾರೆ. ಬುದ್ಧನ ಕೆಲವು ಉಪದೇಶ ಗಳನ್ನು ಸಮಕಾಲೀನ ಜೀವನ ಧೋರಣೆಗಳೊಂದಿಗೆ ಹೋಲಿಸಿ ಚರ್ಚಿ ಸಿದ್ದಾರೆ. ‘ಶುದ್ಧ ಮನಸ್ಸೇ ಶುದ್ಧ ಬದುಕಿನ ಮೂಲ ಮಂತ್ರ’ ಎಂಬ ಬೋಧನೆ ಇಡೀ ಪುಸ್ತಕದ ‘ಧ್ವನಿ’ ಯಾಗಿದೆ. ಪಾಲಿ ಭಾಷೆ ಮತ್ತು ಸಾಹಿತ್ಯದಲ್ಲಿ ಶ್ರೀರಂಗರಾಜು ಅವರಿಗಿರುವ ಆಸಕ್ತಿ ಅಭಿರುಚಿಗಳು ಈ ಪುಸ್ತಕದಲ್ಲಿ ಸುಪ್ರಕಟವಾಗಿದೆ. ಆದರೆ ಇವರು ಮಾಡಿರುವ ‘ಧರ್ಮಪದ’ ದ ಕೆಲವು ಪದ್ಯಗಳ ಅನುವಾದ (ಪು ೨೩೪) ಸಮರ್ಪಕವಾಗಿಲ್ಲ. ಜಿ. ಪಿ. ರಾಜರತ್ನಂ ಅವರು ‘ಧರ್ಮಪದ’ದ ಕನ್ನಡ ಅನುವಾದವನ್ನು ಪ್ರಕಟಿ ಸಿದ್ದಾರೆ. ಲೇಖಕರು ಈ ಪುಸ್ತಕದ ನೆರವನ್ನು ಪಡೆಯಬಹುದಾಗಿತ್ತು. ಪುಸ್ತಕದಲ್ಲಿ ಬೌದ್ಧ ಧರ್ಮದ ಅನೇಕ ಪಾರಿಭಾಷಿಕ ಪದಗಳನ್ನು (ಉದಾ: ನಿಬ್ಬಾಣ ಇತ್ಯಾದಿ) ಬಳಸಿದ್ದಾರೆ. ಪುಸ್ತಕದ ಕೊನೆಯಲ್ಲಿ ಇಂಥ ಪದ ಗಳಿಗೆ ಅರ್ಥಗಳನ್ನು ಕೊಟ್ಟಿದ್ದರೆ ಓದುಗರಿಗೆ ಸಹಾಯವಾಗುತ್ತಿತ್ತು. ಆದರೂ ಶ್ರೀರಂಗರಾಜು ಅವರು ಶ್ರದ್ಧೆಯಿಂದ ಬರೆದಿರುವ ಈ ಪುಸ್ತಕ ಕನ್ನಡ ಜೀವನ ಚರಿತ್ರೆಗಳ ಸಾಲಿಗೆ ಒಂದು ಮುಖ್ಯ ಸೇರ್ಪಡೆ.

## ೬ ‘ವಿಚಾರವಾದಿ ಪೆರಿಯಾರ್’

### ದೇಜಗೌ

‘ಪೆರಿಯಾರ್’ ರಾಮಸ್ವಾಮಿ ನಾಯಕರನ್ನು ಕುರಿತು ದೇಜಗೌ ಅವರು ‘ವಿಚಾರವಾದಿ ಪೆರಿಯಾರ್’ ಎಂಬ ಜೀವನ ಚರಿತ್ರೆಯನ್ನು ಬರೆದಿದ್ದಾರೆ. ‘ಕ್ರಾಂತಿಯ ಕಿಡಿ’ ಯಾಗಿದ್ದ ರಾಮಸ್ವಾಮಿನಾಯಕರದು ‘ಅಗ್ನಿಚೈತನ್ಯ’. ದಕ್ಷಿಣ ಭಾರತದವರ, ಮುಖ್ಯವಾಗಿ ತಮಿಳರ ಸಾಮಾ

ಜಿಕ, ಮತ್ತು ಸಾಂಸ್ಕೃತಿಕ ಸ್ಥಿತಿಗತಿಗಳ ಸುಧಾರಣೆಗಾಗಿ ತಮ್ಮ ಬದುಕಿನುದ್ದಕ್ಕೂ ಶ್ರಮಿಸಿದರು. 'ದ್ರಾವಿಡ ಕಳಗಂ' ಎಂಬ ಸಂಘವನ್ನು ಕಟ್ಟಿ ಬೆಳಸಿದರು. ಕಂದಾಚಾರ, ಜಾತಿ ಪದ್ಧತಿ ಮತ್ತು ಮೂರ್ತಿ ಪೂಜೆಗಳನ್ನು ಖಂಡಿಸಿದರು. ಶ್ರೀಮಂತ ಮನೆತನದಲ್ಲಿ ಜನಿಸಿದ್ದರೂ ತಮ್ಮ ಧ್ಯೇಯ ಸಾಧನೆಗಾಗಿ ತಮ್ಮ ಸಂಪತ್ತನ್ನೂ ಕಡೆಗಣಿಸಿದರು. ಅನಾಥರಿಗೆ 'ತಂದೆ' ಯಂತಿದ್ದ ರಾಮಸ್ವಾಮಿ ನಾಯಕರು 'ವಿಚಾರವಾದಿ' ಯಾಗಿ, 'ಮಾನವತಾವಾದಿ'ಯಾಗಿ ಬೆಳಗಿದ ಬಗೆಯನ್ನು ದೇಜಗೌ ಈ ಪುಸ್ತಕದಲ್ಲಿ ವಿವರವಾಗಿ ಸಮರ್ಥವಾಗಿ ಚಿತ್ರಿಸಿದ್ದಾರೆ. ಪುಸ್ತಕಕ್ಕೆ ಬರೆದಿರುವ ಪೀಠಿಕೆಯಲ್ಲಿ ಜಾತಿ-ಮತಗಳ ಹುಟ್ಟು, ಬೆಳವಣಿಗೆ, ಇವುಗಳಿಂದ ಸಮಾಜ ಜೀವನ ಕೆಟ್ಟ ಬಗೆಯನ್ನು ದೇಜಗೌ ವಸ್ತುನಿಷ್ಠವಾಗಿ ವಿವೇಚಿಸಿದ್ದಾರೆ. ಪುಸ್ತಕದ ಪ್ರವೇಶದಲ್ಲಿ ರಾಮಸ್ವಾಮಿನಾಯಕರನ್ನು ತಾವು ಸಂದರ್ಶಿಸಿದ 'ಚಿತ್ರ' ಗಳನ್ನು ಜೀವಂತವಾಗಿ ಮೂಡಿಸಿದ್ದಾರೆ.

ಕನ್ನಡ ಜೀವನ ಚರಿತ್ರೆಗಳ ಸಾಲಿಗೆ 'ವಿಚಾರವಾದಿ ಪೆರಿಯಾರ್' ಒಂದು ಗಣ್ಯ ಸೇರ್ಪಡೆ.

## ೭ 'ನೆನಪಿನ ದೋಣಿಯಲ್ಲಿ'

### ಕುವೆಂಪು

'ನೆನಪಿನ ದೋಣಿಯಲ್ಲಿ' (೧೯೮೦) ಒಂದು ಆತ್ಮಚರಿತ್ರೆ; ಸಂಕೀರ್ಣ ಸ್ವರೂಪದ ಸ್ಮೃತಿಕೋಶ. ೬೫ ಭಾಗಗಳಲ್ಲಿ ೧೧೩೩ ಪುಟಗಳಲ್ಲಿ ಅರಳಿರುವ ಇಲ್ಲಿನ ನೆನಪುಗಳು ವೈವಿಧ್ಯಮಯವಾಗಿವೆ : ಸ್ವಾರಸ್ಯವಾಗಿವೆ.

ಕುವೆಂಪು ಅವರು ಬಹುಮಟ್ಟಿಗೆ ತಮ್ಮ 'ದಿನಚರಿ'ಯನ್ನು ಆಧರಿಸಿಕೊಂಡು ರಚಿಸಿರುವ 'ನೆನಪಿನ ದೋಣಿಯಲ್ಲಿ' ಕನ್ನಡನಾಡು ನುಡಿಗಳಿಗೆ ಸಂಬಂಧಿಸಿದ ಅನೇಕ ಸಾಂಸ್ಕೃತಿಕ ದಾಖಲೆಗಳಿವೆ ; ಭಾರತ ಕರ್ನಾಟಕಕ್ಕೆ ಸಂಬಂಧಿಸಿದ ಮುಖ್ಯ ರಾಜಕೀಯ ಘಟನೆಗಳ ಉಲ್ಲೇಖವೂ ಇದೆ. ಮಲೆನಾಡಿನ ಮಡಿಲಲ್ಲಿ ಹುಟ್ಟಿದ ಕುವೆಂಪು ಅವರು 'ಸಾಂಸ್ಕೃತಿಕ

ನಗರ' ಮೈಸೂರಿನಲ್ಲಿ ವ್ಯಾಸಂಗ ಮಾಡಿ, ಶ್ರೀಗುರು ಕೃಪೆಯಿಂದ ದೊಡ್ಡ ಸಾಧಕರಾಗಿ ಬೆಳೆದ ಬಗ್ಗೆ; ಇಂಗ್ಲಿಷ್ ಭಾಷೆಯಲ್ಲಿ ಕಾವ್ಯ ರಚನೆಯನ್ನು ಆರಂಭಿಸಿ, ಕಡೆಗೆ ಕನ್ನಡಕ್ಕೆ ತಿರುಗಿದ್ದು; ಮಹಾ ಕವಿಯಾಗಲು ಅವರು ನಡೆಸಿದ ಸಿದ್ಧತೆಗಳು; ಕನ್ನಡ ಕಾವ್ಯಕ್ಷೇತ್ರದಲ್ಲಿ ಅವರು ಸಾಧಿಸಿದ ಸಾಧನೆ ಇವೆಲ್ಲ ಬಹು ಸ್ವಾರಸ್ಯವಾಗಿ ಈ ಸಂಪುಟದಲ್ಲಿ ನಿರೂಪಣೆಗೊಂಡಿವೆ. ಕುವೆಂಪು ಇಂಗ್ಲಿಷ್ ಮತ್ತು ಕನ್ನಡದಲ್ಲಿ ಬರೆದಿದ್ದ ಅನೇಕ ಅಪ್ರಕಟಿತ ಕವನಗಳು ಈ ಸಂಪುಟದಲ್ಲಿ ಮೊದಲ ಬಾರಿಗೆ ಪ್ರಕಟವಾಗಿವೆ. ಈ ಸಂಪುಟ ದಲ್ಲಿ ದಂಡೆ ದಂಡೆಯಾಗಿ ಬರುವ 'ವ್ಯಕ್ತಿ ಚಿತ್ರ'ಗಳನ್ನು ಓದುವುದೇ ಒಂದು ಸೊಗಸು. 'ರಾಷ್ಟ್ರಪಿತ' ಗಾಂಧೀಜಿ ಅವರಿಂದ ಆರಂಬಿಸಿ, ಕೃಷಿಕ ಕಿಟ್ಟಯ್ಯನವರೆಗೂ ಇಲ್ಲಿನ ವ್ಯಕ್ತಿ ಚಿತ್ರಗಳ ವ್ಯಾಪ್ತಿ ಇದೆ. ಗಳಗನಾಥ, ಬಿ ಎಂ ಶ್ರೀ; ಪಂಜೆ; ಮಾಸ್ತಿ ಮುಂತಾದ ಹಿರಿಯ ಸಾಹಿತಿಗಳನ್ನು ಕುವೆಂಪು ಅವರು ಮೊದಲಬಾರಿಗೆ ಸಂದಿಸಿದ ಸಂದರ್ಭಗಳೂ ಸ್ಮರಣೀಯ. ಹೀಗೆ ಬಗೆ ಬಗೆಯ ಘಟನೆಗಳನ್ನು, ಅನುಭವಗಳನ್ನು ವಿವರವಾಗಿ ನಿರೂಪಿಸುವ 'ನೆನಪಿನ ದೋಣಿಯಲ್ಲಿ' ಬೃಹತ್ತಿನಲ್ಲೂ, ಮಹತ್ತಿನಲ್ಲೂ ಒಂದು ಅನನ್ಯವಾದ ಕೃತಿ. ಕನ್ನಡ ಆತ್ಮ ಚರಿತ್ರೆಗಳ ಸಾಲಿಗೆ 'ನೆನಪಿನ ದೋಣಿಯಲ್ಲಿ' ಒಂದು ಮಹತ್ವದ ಸೇರ್ಪಡೆ.

## ೮ 'ಹಿರಿಯರು - ಗೆಳೆಯರು'

### ವಿಸೀ

ಹಿರಿಯ ಸಾಹಿತಿ ವಿ. ಸೀತಾರಾಮಯ್ಯನವರು ರಚಿಸಿರುವ 'ಹಿರಿಯರು-ಗೆಳೆಯರು' (೧೯೮೦) ವ್ಯಕ್ತಿ ಚಿತ್ರಗಳ ಒಂದು ಬೃಹತ್ ಸಂಪುಟ. ಕನ್ನಡದಲ್ಲಿ ಈ ಪ್ರಮಾಣದಲ್ಲಿ ವ್ಯಕ್ತಿ ಚಿತ್ರ ಸಂಪುಟವೊಂದು ಪ್ರಕಟವಾಗಿರುವುದು ಇದೇ ಮೊದಲು. ಇದರಲ್ಲಿ ೩೮ ವ್ಯಕ್ತಿ ಚಿತ್ರಗಳಿವೆ. ಇಲ್ಲಿ ಚಿತ್ರಣಗೊಂಡಿರುವ ವ್ಯಕ್ತಿಗಳಲ್ಲಿ ಕೆಲವರು ವಿಸೀಯವರಿಗೆ ಗುರುಗಳು; ಮತ್ತೆ ಕೆಲವರು ಗೆಳೆಯರು. ಅವರೆಲ್ಲ ಅವರವರ ಕ್ಷೇತ್ರಗಳಲ್ಲಿ ದೊಡ್ಡ ಕೆಲಸ ಮಾಡಿ ಹೆಸರುಗೊಂಡವರು. ವಿಜ್ಞಾನಿಗಳು, ಸಾಹಿತಿಗಳು, ಕಲಾವಿದರು,

ಸಮಾಜಸೇವಕರು, ಆಡಳಿತಗಾರರು, ಹೀಗೆ ಬಗೆಬಗೆಯ ವ್ಯಕ್ತಿಗಳ ಸಿಡಿದಾದ 'ಚಿತ್ರ'ಗಳನ್ನು ವಿಸೀ ಚೆಲುವಾಗಿ, ಆಪ್ತವಾಗಿ ಈ ಸಂಪುಟದಲ್ಲಿ ರೇಖಿಸಿದ್ದಾರೆ. ವ್ಯಕ್ತಿಗಳ ದೊಡ್ಡ ಗುಣಗಳ ಜತೆಗೆ, ಅವರ ಅರೆ-ಕೊರೆಗಳನ್ನೂ ಹೇಳಲು ವಿಸೀ ಮರೆಯುವುದಿಲ್ಲ. 'ವ್ಯಕ್ತಿಯೊಬ್ಬನ ಆದರ್ಶ, ನಗೆ-ನೋವುಗಳು ಆ ವ್ಯಕ್ತಿಗೇ ಸೀಮಿತವಾಗದೇ ಹೇಗೆ ಒಂದು ನಾಡಿನವಾಗಿ ಮಾರ್ಪಡುತ್ತವೆ' ಎಂಬುದು ಇಲ್ಲಿನ ಬರೆವಣಿಗೆಯ ಸಾರ. ವಿಸೀಯವರ ವ್ಯಾಪಕವಾದ ಜೀವನಾನುಭವ, ಆಳವಾದ ಚಿಂತನೆ, ಗುಣಗೌರವ ಬುದ್ಧಿ, ನಾಡು-ನುಡಿಗಳ ಕಟ್ಟಕ್ಕರೆ ಇಲ್ಲಿನ ಬರೆವಣಿಗೆಯಲ್ಲಿ 'ಕೆನೆ'ಗಟ್ಟಿದೆ.

ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯನ್ನು ಬರೆಯುವವರಿಗೆ, ಕರ್ನಾಟಕದ ಸಾಂಸ್ಕೃತಿಕ ಇತಿಹಾಸವನ್ನು ರಚಿಸುವವರಿಗೆ 'ಹಿರಿಯರು-ಗೆಳೆಯರು' ಸಂಪುಟ ಮಾಡುವ ಉಪಕಾರ ದೊಡ್ಡ ಮಟ್ಟದ್ದು.

## ೯ 'ನಾನು ಕಂಡ ಗೆಳೆಯರ ಗುಂಪು'

### ಶೇ. ಗೋ. ಕುಲಕರ್ಣಿ

ದಾರವಾಡದ 'ಗೆಳೆಯರ ಗುಂಪಿನ' ಮುಖ್ಯ ಪ್ರವರ್ತಕರಾಗಿದ್ದ ಶೇ.ಗೋ. ಕುಲಕರ್ಣಿ ಅವರು ಕಳೆದ ವರ್ಷ (೧೯೭೫) ಎರಡು ಭಾಗಗಳಲ್ಲಿ ಪ್ರಕಟಿಸಿದ 'ನಾನು ಕಂಡ ಗೆಳೆಯರ ಗುಂಪು' ಎಂಬ ಆತ್ಮಕಥೆಯ ಮೂರನೆಯ ಭಾಗವೂ ಮತ್ತು ಮೂರು ಭಾಗಗಳ ಸಂಯುಕ್ತ ಸಂಪುಟವೂ ಈ ವರ್ಷ ಪ್ರಕಟ ಆಗಿದೆ. ಧಾರವಾಡವನ್ನು ಕೇಂದ್ರ ಮಾಡಿಕೊಂಡು 'ಗೆಳೆಯರ ಗುಂಪು' ನಡೆಸಿದ ಸಾಹಿತ್ಯಿಕ ಚಟುವಟಿಕೆಗಳ ಇತಿವೃತ್ತದೊಂದಿಗೆ ಕುಲಕರ್ಣಿ ಅವರ ಆತ್ಮವೃತ್ತವೂ ಕೂಡಿಕೊಂಡಿರುವ ಈ ಸಂಪುಟ ಬೃಹತ್ ಪ್ರಮಾಣದ ಆತ್ಮ ಚರಿತ್ರೆ.

ಆದರ್ಶದ ಹಂಬಲವನ್ನು ಹೊತ್ತು ಅದರ ಸಾಧನೆಗಾಗಿ ಭಿನ್ನವ್ಯಕ್ತಿಗಳ ಜತೆ ಲೇಖಕರು ಏಗಿದ ಕಥೆ ಸರಳ ನಿರಾಡಂಬರ ಶೈಲಿಯಲ್ಲಿ ಈ ಸಂಪುಟದಲ್ಲಿ ಬಿತ್ತರಗೊಂಡಿದೆ. 'ಗೆಳೆಯರ ಗುಂಪು ಕೇವಲ ಸಾಹಿತಿಗಳ

ಗುಂಪು ಮಾತ್ರ ಆಗಿರಲಿಲ್ಲ; ಗೆಳೆತನ ಆದರ ಗುರಿಯಾಗಿತ್ತು; ಸಾಹಿತ್ಯವು ಅದಕ್ಕೊಂದು ಸಾಧನ ಆಗಿತ್ತು' ಎಂಬುದನ್ನು ಲೇಖಕರು ಉದ್ದಕ್ಕೂ ಸಾಧಿಸುತ್ತಾರೆ. ಗೆಳೆಯರ ಗುಂಪಿನಲ್ಲಿ ತಾವುಂಡ ನಲಿವನ್ನು, ನೋವನ್ನು ಮತ್ತು ನಿರಾಶೆಯನ್ನು ಸಂದರ್ಭಗಳನ್ನು ವಿವರಿಸುವುದರ ಮೂಲಕ, ವ್ಯಕ್ತಿಗಳನ್ನು ಪರಿಚಯಿಸುವುದರ ಮೂಲಕ ನಿರೂಪಿಸಿದ್ದಾರೆ. 'ಗೆಳೆಯರ ಗುಂಪಿನ' ಗೆಳೆತನ ನಿತ್ಯ ಹಸಿರಾಗಿರುವಂತೆ ಮಾಡಲು ಕುಲಕರ್ಣಿಯವರು ಅಂತಃಕರಣ ಪೂರ್ವಕವಾಗಿ ಪ್ರಯತ್ನಿಸುತ್ತಾರೆ, ಆದಕ್ಕಾಗಿ ತಮ್ಮ ಹಣವನ್ನೂ, ಕಾಲವನ್ನೂ ವಿನಿಯೋಗಿಸುತ್ತಾರೆ; ಎಲ್ಲ ಸಂದರ್ಭಗಳಿಗೂ ಹೊಂದಿಕೊಳ್ಳುತ್ತಾರೆ: ಗೆಳೆಯರ ಅಭ್ಯುದಯವನ್ನು ಹಾರೈಸುತ್ತಾರೆ. ಆದರೆ 'ಗೆಳೆಯರ ಗುಂಪಿನ' ಬಹುಪಾಲು ಗೆಳೆಯರ 'ದಿವ್ಯ ನಿರ್ಲಕ್ಷ್ಯ'ಕ್ಕೆ ಇವರು ಒಳಗಾಗುತ್ತಾರೆ! ಹೀಗಾಗಿ ಇದೊಂದು ಮನಮಿಡಿಯುವ ಆತ್ಮವೃತ್ತಾಂತವಾಗಿದೆ.

ಕುಲಕರ್ಣಿಯವರು ತಮ್ಮ ಅನ್ನಿಸಿಕೆಗಳನ್ನು, ಅನುಭವಗಳನ್ನು ಪ್ರಾಂಜಲವಾಗಿ ಈ ಸಂಪುಟದಲ್ಲಿ ನಿರೂಪಿಸಿದ್ದಾರೆ. ಅವರ ಸರಳ ಮನಸ್ಸು ನೇರ ನಡೆ-ನುಡಿಗಳು, ನಾಡು-ನುಡಿಗಳ ಬಗ್ಗೆ ಇರುವ ಗೌರವ ಮೆಚ್ಚುಗೆಗೆ ವಿಶೇಷ ಆರ್ಹವಾದವು. 'ನಾನು ಕಂಡ ಗೆಳೆಯರ ಗುಂಪು' ಕನ್ನಡದಲ್ಲಿ ಒಂದು ಅಪರೂಪ ಕೃತಿ ಮಾತ್ರ ಅಲ್ಲ, 'ಕನ್ನಡ ನವೋದಯ' ಕಾಲವನ್ನು ತಿಳಿಯಲು, ಬರೆಯಲು ಒಂದು ಅಧಿಕೃತ ಆಕರ ಗ್ರಂಥವೂ ಆಗಿದೆ.

## ೧೦ 'ಕಲಾತಪಸ್ವಿ ಆರ್. ನಾಗೇಂದ್ರರಾವ್'

### ಹ. ವೆಂ. ಸೀತಾರಾಮಯ್ಯ

ಕನ್ನಡ ರಂಗಭೂಮಿ ಮತ್ತು ಚಲನಚಿತ್ರ ಕ್ಷೇತ್ರಗಳಲ್ಲಿ ಆರ್. ನಾಗೇಂದ್ರರಾಯರದು ದೊಡ್ಡ ಹೆಸರು. ನಟರಾಗಿ, ನಿರ್ದೇಶಕರಾಗಿ ನಾಗೇಂದ್ರರಾಯರು ಹಲವು ಬಗೆಯ ಸಾಹಸಗಳನ್ನು ನಡೆಸಿದವರು. ಸಾಮಾನ್ಯ ಕುಟುಂಬವೊಂದರಲ್ಲಿ ಹುಟ್ಟಿ, ಚಿಕ್ಕಂದಿನಲ್ಲಿಯೇ ನಾಟಕದಲ್ಲಿ ಆಸಕ್ತಿ ವಹಿಸಿ, ಹಲವು ನಾಟಕ ಕಂಪನಿಗಳಲ್ಲಿ ಸಣ್ಣ-ಪುಟ್ಟ ಪಾತ್ರಗಳನ್ನು

ವಹಿಸಿ, ಅಭಿನಯ ಕಲೆಯನ್ನು ಕುದುರಿಸಿಕೊಂಡ ನಾಗೇಂದ್ರರಾಯರು ವರದಾಚಾರ್ಯರ ಕಂಪನಿ, ಶಿರಹಟ್ಟಿ ಕಂಪನಿ, ಗುಬ್ಬಿ ಕಂಪನಿ ಮುಂತಾದ ಹೆಸರಾಂತ ನಾಟಕ ಕಂಪನಿಗಳಲ್ಲಿ ಬಗೆಬಗೆಯ ಪಾತ್ರಗಳನ್ನು ಅಭಿನಯಿಸಿ ಪ್ರಸಿದ್ಧಿಗೆ ಬಂದರು. ಅನಂತರ ಚಲನಚಿತ್ರ ಕ್ಷೇತ್ರವನ್ನು ಪ್ರವೇಶಿಸಿದ ನಾಗೇಂದ್ರರಾಯರು, ಆ ಕ್ಷೇತ್ರದಲ್ಲೂ ತಮ್ಮ ಪ್ರತಿಭಾ ಸಾಮರ್ಥ್ಯದಿಂದ ಬಹು ಬೇಗ ಜನಪ್ರಿಯರಾದರು. ನಿರ್ದೇಶಕರೂ ಆಗಿದ್ದ ನಾಗೇಂದ್ರರಾಯರು ನಿರ್ಮಿಸಿದ 'ಭೂ ಕೈಲಾಸ'; 'ವಸಂತಸೇನಾ'; 'ಭಕ್ತ ಕಬೀರ್'; 'ಪ್ರೇಮದ ಪುತ್ರಿ' ಮೊದಲಾದ ಚಲನ ಚಿತ್ರಗಳು ತುಂಬ ಜನಪ್ರಿಯವಾದುವು; ಬಗೆಬಗೆಯ ಪ್ರಶಸ್ತಿಗಳನ್ನೂ ಗಳಿಸಿದುವು. ಕನ್ನಡದ ಜೊತೆಗೆ ತಮಿಳು ಚಲನಚಿತ್ರ ರಂಗದಲ್ಲೂ ನಾಗೇಂದ್ರರಾಯರದು ದೊಡ್ಡ ಹೆಸರು. ತಮ್ಮ ಜೊತೆ ಕಲಾವಿದರ ಆದರ ಅಭಿಮಾನಗಳಿಗೆ ಪಾತ್ರರಾಗಿದ್ದ ಇವರು, ತಮ್ಮ ಜೀವನದ ಕೊನೆಯ ದಿನಗಳಲ್ಲಿ ಬೆಂಗಳೂರಿನಲ್ಲಿ 'ಆದರ್ಶ ಫಿಲ್ಮ್ ಇನ್‌ಸ್ಟಿಟ್ಯೂಟ್' ಎಂಬ ಒಂದು ಚಲನಚಿತ್ರ ತರಬೇತಿ ಸಂಸ್ಥೆಯನ್ನು ಕಟ್ಟಿ ಬೆಳಸಿದರು. ಹೀಗೆ ನಾಗೇಂದ್ರರಾಯರು ಸುಮಾರು ಏಳು ದಶಕಗಳಿಗೂ ಮಿಕ್ಕ ಕಲಾಜೀವನದ ಹಲವು ಮುಖಗಳ ಪರಿಚಯವನ್ನು ಹ. ವೆಂ. ಸೀತಾರಾಮಯ್ಯನವರು ಈ ಪುಸ್ತಕದಲ್ಲಿ ಮಾಡಿಕೊಟ್ಟಿದ್ದಾರೆ. ನಾಗೇಂದ್ರರಾಯರ ವೃತ್ತಿ ಜೀವನಕ್ಕೆ ಸಂಬಂಧಿಸಿದ ಹಲವು ಅಪರೂಪ ಛಾಯಾಚಿತ್ರಗಳನ್ನೂ ಈ ಪುಸ್ತಕದಲ್ಲಿ ಸೇರಿಸಲಾಗಿದೆ. ನಾಗೇಂದ್ರರಾಯರ ಬಹುಮುಖ ಪ್ರತಿಭೆಯನ್ನು ಅರಿಯಲು ಈ ಪುಸ್ತಕ ನೆರವಾಗುತ್ತದೆ.

## ೧೧ 'ನಾಟ್ಯ ಸರಸ್ವತಿ ಜಟ್ಟಿ ತಾಯಮ್ಮ'

**ರಾಜಶ್ರೀ**

ಮುಮ್ಮಡಿ ಕೃಷ್ಣರಾಜ ಒಡೆಯರ ಖಾಸಾ ಊಳಿಗದಲ್ಲಿದ್ದ ದಾಸ ಜಟ್ಟಪ್ಪನವರ ಪುತ್ರಿಯಾಗಿ ಜನಿಸಿ, ಚಿಕ್ಕಂದಿನಲ್ಲಿಯೇ ಸಂಗೀತ ನೃತ್ಯ ಕಲೆಗೆ ಒಲಿದು, ತಮ್ಮ ಪ್ರತಿಭಾಶಕ್ತಿಯಿಂದ ಆ ಕಲೆಗಳಲ್ಲಿ ಬಹುಬೇಗ

ಪರಿಣತಿಯನ್ನು ಗಳಿಸಿಕೊಂಡು, ಹದಿನೈದನೆಯ ವಯಸ್ಸಿನಲ್ಲಿಯೇ ಮಹಾರಾಜರ ಮುಂದೆ ನೃತ್ಯ ಪ್ರದರ್ಶನ ಮಾಡಿ 'ರಾಜನರ್ತಕಿ' ಪ್ರಶಸ್ತಿಯನ್ನು ಪಡೆದು ಮುಂದೆ ನೃತ್ಯ ಕ್ಷೇತ್ರದಲ್ಲಿನ ತಮ್ಮ ಬಗೆಬಗೆಯ ಸಾಧನೆಗಳಿಂದ 'ನಾಟ್ಯ ಸರಸ್ವತಿ' ಎಂಬ ಕೀರ್ತಿಗೂ ಭಾಜನರಾದ ಜಟ್ಟಿತಾಯಮ್ಮನವರು 'ಮೈಸೂರು ನೃತ್ಯ ಸಂಪ್ರದಾಯದ' ಹಿರಿಮೆಯನ್ನು ಬೆಳಗಿಸಿದವರು ಇವರ ಜೀವನ ಸಾಧನೆಗಳ ಪರಿಚಯವನ್ನು 'ರಾಜಶ್ರೀ'ಯವರು ಈ ಕಿರು ಪುಸ್ತಿಕೆಯಲ್ಲಿ ಮಾಡಿಕೊಟ್ಟಿದ್ದಾರೆ. ಜಟ್ಟಿ ತಾಯಮ್ಮನವರ ಪ್ರಮುಖ ಶಿಷ್ಯರಲ್ಲೊಬ್ಬರಾದ ವೆಂಕಟಲಕ್ಷ್ಮಮ್ಮನವರು ತಮ್ಮ ಗುರುಗಳ ಬಗ್ಗೆ ಹೇಳಿರುವ ಮಾತುಗಳು (ಪುಟ ೩೯-೪೧) ತಾಯಮ್ಮನವರ ವ್ಯಕ್ತಿತ್ವದ ಹಲವು ಮುಖಗಳನ್ನು ಬಹು ಚೆನ್ನಾಗಿ ಬೆಳಗಿವೆ. ಇಂಥ ಅಭಿಪ್ರಾಯಗಳನ್ನು ಲೇಖಕರು ಸಂಗ್ರಹಿಸಿಕೊಟ್ಟಿರುವುದು ಮೆಚ್ಚತಕ್ಕ ವಿಷಯ.

## ೧೨ 'ಪಟ್ಟಾಭಿ ಸೀತಾರಾಮಯ್ಯ'

### ಸುಂದರಂ

'ಮಹಾತ್ಮ ಗಾಂಧೀಜಿಯವರ ಭಾವನೆಗಳಿಗೆ ಭಾಷ್ಯಕಾರರು ಎಂದು ಪ್ರಸಿದ್ಧರಾಗಿದ್ದ ಪಟ್ಟಾಭಿ ಸೀತಾರಾಮಯ್ಯನವರು ಹೆಸರಾಂತ ರಾಜಕಾರಣಿಗಳೂ, ದೊಡ್ಡ ದೇಶಭಕ್ತರೂ ಆಗಿದ್ದರು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ನೇರವಾಗಿ ಭಾಗವಹಿಸಿದ್ದ ಅವರು, ಸ್ವತಂತ್ರ ಭಾರತದ ಅಭಿವೃದ್ಧಿಗೂ ಶ್ರಮಿಸಿದರು. 'ಪಟ್ಟಾಭಿ' ಎಂದೇ ಜನಪ್ರಿಯರಾಗಿದ್ದ ಅವರು, ಆಂಧ್ರಪ್ರದೇಶದ ಒಂದು ಸಾಮಾನ್ಯ ಶ್ಯಾನುಭೋಗ ಮನೆತನದಲ್ಲಿ ಹುಟ್ಟಿ, ಚಿಕ್ಕಂದಿನಲ್ಲಿಯೇ ತಂದೆಯನ್ನು ಕಳೆದುಕೊಂಡು, ಹಲವು ಬಗೆಯ ಕಷ್ಟಗಳನ್ನೂ ಎದುರಿಸಿ ಬೆಳೆದರು. ಪ್ರತಿಭಾವಂತ ವಿದ್ಯಾರ್ಥಿಯಾಗಿದ್ದ ಅವರು, ಗಂಜಾಂ ವೆಂಕಟರತ್ನಂ ಎಂಬ ಶ್ರೀಮಂತರ ಸಹಾಯದಿಂದ ವೈದ್ಯಕೀಯ ಶಿಕ್ಷಣ ಪಡೆದರು. ಮಚಲಿಪಟ್ಟಣದಲ್ಲಿ ಸುಮಾರು ಹತ್ತು ವರ್ಷಗಳ ಕಾಲ ವೈದ್ಯರಾಗಿ ಕೆಲಸಮಾಡಿ ಜನಪ್ರಿಯರಾದರು. ಸ್ವಾತಂತ್ರ್ಯ ಸಂಗ್ರಾಮಕ್ಕೆ ಆಕರ್ಷಿತರಾದ ಪಟ್ಟಾಭಿಯವರು ವೈದ್ಯಕೀಯ ವೃತ್ತಿ





ಯನ್ನು ಬಿಟ್ಟು, ರಾಜಕೀಯ ಕ್ಷೇತ್ರಕ್ಕೆ ಪ್ರವೇಶಿಸಿದರು. ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಸಾಮಾನ್ಯ ಸದಸ್ಯರಾಗಿ, ಮುಂದೆ ಆ ಸಂಸ್ಥೆಯ ಅಧ್ಯಕ್ಷರೂ ಆದ ಪಟ್ಟಾಭಿಯವರು, ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆಯ ಚಿನ್ನದ ಹಬ್ಬದ ನೆನಪಿಗಾಗಿ, ಆ ಸಂಸ್ಥೆಯ ರೋಮಾಂಚಕಾರಿ ಇತಿಹಾಸವನ್ನು ಉಜ್ವಲವಾಗಿ ರಚಿಸಿ ಖ್ಯಾತರಾದರು. ಆಂಧ್ರಪ್ರದೇಶದಲ್ಲಿ ಅನೇಕ ಬ್ಯಾಂಕುಗಳನ್ನು, ವಿಮಾ ಸಂಸ್ಥೆಗಳನ್ನು ಆರಂಭಿಸಿ ಬೆಳಸಿದರು. ಮಧ್ಯ ಪ್ರದೇಶದ ರಾಜ್ಯಪಾಲರಾಗಿಯೂ ಸೇವೆಸಲ್ಲಿಸಿದ ಪಟ್ಟಾಭಿಯವರು ಉದ್ದಕ್ಕೂ ನಡೆಸಿದ್ದು ಸರಳ, ಪ್ರಾಮಾಣಿಕ ಜೀವನವನ್ನು. ಪುಸ್ತಕ ಪ್ರೇಮಿಗಳೂ, ಲೇಖಕರೂ ಆಗಿದ್ದ ಪಟ್ಟಾಭಿಯವರು 'ಜನ್ಮಭೂಮಿ'; 'ಇಂಡಿಯನ್ ರಿಪಬ್ಲಿಕ್'; 'ತೆಲುಗು ಸಹಕಾರ ಪತ್ರಿಕೆ' ಎಂಬ ಪತ್ರಿಕೆಗಳನ್ನು ಸಂಪಾದಿಸಿ ಪ್ರಕಟಿಸಿದರಲ್ಲದೆ; 'ಭಾರತದ ರಾಷ್ಟ್ರೀಯತೆ'; 'ಆರ್ಥಿಕ ರಂಗದಲ್ಲಿ ಭಾರತದ ಮುನ್ನಡೆ'; 'ಆರೋಗ್ಯಶಾಸ್ತ್ರ' ಮುಂತಾದ ಪುಸ್ತಕಗಳನ್ನು ಬರೆದಿದ್ದಾರೆ. ಇಂಥ ದೇಶಭಕ್ತರ ಆದರ್ಶ ಬದುಕಿನ ಚಿತ್ರಣ ಈ ಪುಸ್ತಕದಲ್ಲಿ ಸೊಗಸಾಗಿ ಚಿತ್ರಣಗೊಂಡಿದೆ.

## ೧೩ 'ಶಿ ಶಿ ಬಸವನಾಳ'

### ಗುರುಲಿಂಗ ಕಾಪಸೆ

ಕರ್ನಾಟಕದ ಶಿಕ್ಷಣ ಕ್ಷೇತ್ರದಲ್ಲಿದೊಡ್ಡ ಹೆಸರು ಮಾಡಿದ್ದ ಶಿ ಶಿ ಬಸವನಾಳರು, ಅಧ್ಯಾಪಕರಾಗಿ, ಪ್ರಿನ್ಸಿಪಾಲರಾಗಿ, ಸಂಶೋಧಕರಾಗಿ ಮತ್ತು ಆಡಳಿತಗಾರರಾಗಿ ಗಣ್ಯವಾದ ಸೇವೆಯನ್ನು ಸಲ್ಲಿಸಿದವರು. ಶೈಕ್ಷಣಿಕವಾಗಿ ಬಹಳ ಹಿಂದುಳಿದಿದ್ದ ಉತ್ತರ ಕರ್ನಾಟಕ ಪ್ರದೇಶದಲ್ಲಿ ಹತ್ತಾರು ಶಿಕ್ಷಣ ಸಂಸ್ಥೆಗಳನ್ನು ಆರಂಬಿಸಿ ಬೆಳೆಸಿದ ಕೀರ್ತಿ ಬಸವನಾಳರದು. ಒಂದು ಸಾಮಾನ್ಯ ಮನೆತನದಲ್ಲಿ ಹುಟ್ಟಿದ ಬಸವನಾಳರು ಧಾರವಾಡ ಪುಣೆಗಳಲ್ಲಿ ವ್ಯಾಸಂಗಮಾಡಿ ಉನ್ನತ ದರ್ಜೆಯಲ್ಲಿ ಎಂ ಎ ಪದವಿಯನ್ನು ಪಡೆದರು. ಸುಲಭವಾಗಿ ದೊರೆಯುತ್ತಿದ್ದ ಸರ್ಕಾರಿ ಹುದ್ದೆಯನ್ನು ಬಿಟ್ಟು, ಸಮಾಜ ಸೇವೆಯ ಹಂಬಲದಿಂದ, ಸಹಮನೋಭಾವದ ಸ್ನೇಹಿತರೊಂದಿಗೆ ಬೆಳಗಾವಿ

ಯಲ್ಲಿ ಒಂದು ಶಿಕ್ಷಣ ಸಂಸ್ಥೆಯನ್ನು ಆರಂಭಿಸಿ, ಆ ಸಂಸ್ಥೆಯ ಆಶ್ರಯದಲ್ಲಿ ಬೆಳಗಾವಿ, ಧಾರವಾಡ, ಮತ್ತು ಬಳ್ಳಾರಿಗಳಲ್ಲಿ ಹೈಸ್ಕೂಲು ಮತ್ತು ಕಾಲೇಜುಗಳನ್ನು ಆರಂಭಿಸಿ ಬೆಳಸಿದರು. ತಾನೆ ಅಧ್ಯಾಪಕರಾಗಿ ಪ್ರಿನ್ಸಿಪಾಲ ರಾಗಿ ನಕ್ಷರೀತಿಯಲ್ಲಿ ಕಾರ್ಯನಿರ್ವಹಿಸಿದರು. ಉತ್ತಮ ಬೋಧಕರೆಂದು ವಿದ್ಯಾರ್ಥಿಗಳಲ್ಲಿ ಹೆಸರಾದರು. ಕರ್ನಾಟಕ ವಿಶ್ವವಿದ್ಯಾಲಯದ ಆರಂಭಕ್ಕೆ ಪ್ರಯತ್ನಿಸಿದವರಲ್ಲಿ ಪ್ರಮುಖರಾದ ಬಸವನಾಳರು, ಆ ವಿಶ್ವವಿದ್ಯಾಲಯದ ಸೆನೆಟ್, ಸಿಂಡಿಕೇಟ್ ಸದಸ್ಯರಾಗಿ ಕಾರ್ಯನಿರ್ವಹಿಸಿದರು. ಕನ್ನಡದ ಜತೆ ಸಂಸ್ಕೃತ ಇಂಗ್ಲಿಷ್ ಮತ್ತು ಮರಾಠಿ ಭಾಷೆಗಳಲ್ಲೂ ಪರಿಶ್ರಮವನ್ನು ಪಡೆದ್ದ ಬಸವನಾಳರು, 'ಚೆನ್ನಬಸವ ಪುರಾಣ' 'ಪ್ರಭುಲಿಂಗಲೀಲೆ' 'ಶರಶಂಕರ ವಿಳಾಸ' ಮುಂತಾದ ಪ್ರಾಚೀನ ಕಾವ್ಯಗಳನ್ನು ಸಂಪಾದಿಸಿ ಪ್ರಕಟಿಸಿದರು. 'ವಾಗ್ಭೂಷಣ' ಮತ್ತು 'ಜಯಕರ್ಣಾಟಕ' ಪತ್ರಿಕೆಗಳ ಸಂಪಾದಕರಾಗಿಯೂ ಸೇವೆ ಸಲ್ಲಿಸಿದರು. ಹೀಗೆ ನಾಡು-ನುಡಿಗಳ ಏಗೆಗೆ ವಿವಿಧ ಕ್ಷೇತ್ರಗಳಲ್ಲಿ ಕೆಲಸಮಾಡಿದ ಬಸವನಾಳರನ್ನು ಇಪ್ಪತ್ತೊಂದೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡಿ ಗೌರವಿಸಲಾಯಿತು. ಇಂಥ ಹಿರಿಯ ಭಾಷಾ ಸೇವಕರ ಸಾರ್ಥಕ ಬದುಕಿನ ವಿವರಗಳನ್ನು ಈ ಪುಸ್ತಕದಲ್ಲಿ ಅಚ್ಚುಕಟ್ಟಾಗಿ ಸಂಗ್ರಹಿಸಲಾಗಿದೆ.

## ೧೪ 'ಚೆಂಬೈ ವೈದ್ಯನಾಥ ಭಾಗವತರ್'

### ಆರ್ ಕೆ ರಾಮನಾಥನ್

ಕರ್ನಾಟಕ ಸಂಗೀತದ ಹೆಸರಾಂತ ವಿದ್ವಾಂಸರಾದ ಚೆಂಬೈ ವೈದ್ಯನಾಥ ಭಾಗವತರು ತಮಿಳುನಾಡಿನ ಚೆಂಬೈ ಎಂಬ ಊರಿನವರು. ಅವರದು ಹೆಸರಾಂತ ಸಂಗೀತ ಮನೆತನ. ಅವರ ಮುತ್ತಜ್ಜ, ತಾತ, ತಂದೆ ಎಲ್ಲರೂ ಸಂಗೀತ ಕ್ಷೇತ್ರದಲ್ಲಿ ಹೆಸರಾಗಿದ್ದರು. ಮನೆಯಲ್ಲಿಯೇ ತಂದೆಯ ಬಳಿ ಸಂಗೀತ ಶಿಕ್ಷಣವನ್ನು ಆರಂಭಿಸಿದ ಭಾಗವತರು, ಹೆಸರಾಂತ ವಿದ್ವಾಂಸರ ಬಳಿ ಸಾಧನೆ ಮಾಡಿ, ತಮ್ಮ ಹದಿನೈದನೆಯ ವಯಸ್ಸಿನಲ್ಲಿಯೇ ಸಾರ್ವಜನಿಕ ಕಛೇರಿಗಳನ್ನು ನಡೆಸಿ, ತಮ್ಮ ಪ್ರತಿಭೆಯನ್ನು ಪ್ರಕಟಿಸಿದರು.

ಭಾರತದ ಉದ್ದಗಲಕ್ಕೂ ಸಂಗೀತ ಕಛೇರಿಗಳನ್ನು ನಡೆಸಿದ ಭಾಗವತರು
ಜನಮನ್ನಣೆಯನ್ನು ಗಳಿಸಿಕೊಂಡರು. ಇವರ ಸಂಗೀತವನ್ನು ಮೆಚ್ಚಿದ
ಜನತೆ ಇವರಿಗೆ 'ಗಾಯನ ಗಂದರ್ವ'; 'ಸಂಗೀತ ಸಾಮ್ರಾಟ್'
ಮುಂತಾದ ಪ್ರಶಸ್ತಿಗಳನ್ನು ಕೊಟ್ಟು ಗೌರವಿಸಿತು. ತುಂಬ ದೈವಭಕ್ತ
ರಾಗಿದ್ದ ಚೆಂಬೈ, ನೂರಾರು ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡಿದರು.
ತಮ್ಮ ಜೀವನದ ಕೊನೆಯವರೆಗೂ ಹಾಡುವ ಮತ್ತು ಕಲಿಸುವ ಕೆಲಸವನ್ನು
ಶ್ರದ್ಧೆಯಿಂದ ಮಾಡಿದ ಚಂಬೈ ವೈದ್ಯನಾಥ ಭಾಗವತರ ಸೌಜನ್ಯವಯ
ಬದುಕಿನ ಚಿತ್ರವನ್ನು ಈ ಪುಸ್ತಕದಲ್ಲಿ ಕಟ್ಟಿ ಕೊಡಲಾಗಿದೆ.

## ೧೫ 'ಕಸ್ತೂರಿ ರಂಗ ಅಯ್ಯಂಗಾರ್'

### ಎಸ್. ಎಸ್. ರಾಮಪ್ರಸಾದ್

ಶತಮಾನೋತ್ಸವವನ್ನು ಆಚರಿಸಿಕೊಂಡು ಮುನ್ನಡೆಯುತ್ತಿರುವ 'ಹಿಂದೂ' ಪತ್ರಿಕೆ ಪ್ರಾರಂಭದಲ್ಲಿ ಬಗೆ ಬಗೆಯ ಕಷ್ಟಗಳನ್ನೂ ಅನುಭವಿಸ ಬೇಕಾಯಿತು. ಕೆಲವು 'ಆದರ್ಶಪ್ರೇಮಿ' ಯುವಕರ ಸಾಹಸದಿಂದ ಹುಟ್ಟಿ ಈ ಪತ್ರಿಕೆಗೆ ಯೋಗ್ಯ ಮಾರ್ಗದರ್ಶನದ ಅಭಾವದ ಜತೆಗೆ ಆರ್ಥಿಕ ಅಡಚಣೆಯೂ ಇತ್ತು. ಆದರೆ 'ದೇಶಪ್ರೇಮ'ವೇ ಬಂಡವಾಳವಾಗಿದ್ದರಿಂದ ಪತ್ರಿಕೆ ನಿಲ್ಲಲಿಲ್ಲ; ಕುಂಟುತ್ತಲೇ ನಡೆದು ಇಪ್ಪತ್ತೈದು ವರ್ಷಗಳನ್ನು ಮುಟ್ಟಿತು. ಅಷ್ಟರ ವೇಳೆಗೆ ಪತ್ರಿಕೆಗೆ ಒಂದು ಲಕ್ಷ ರೂಪಾಯಿಗಳ ಸಾಲ ಆಗಿತ್ತು! ಅಂಥ ಕ್ಲಿಷ್ಟ ಸಮಯದಲ್ಲಿ 'ಹಿಂದೂ'ಪತ್ರಿಕೆಯನ್ನು ವಹಿಸಿ ಕೊಂಡ ಕಸ್ತೂರಿ ರಂಗ ಅಯ್ಯಂಗಾರರು ತಮ್ಮ ಶಕ್ತಿಯನ್ನೆಲ್ಲಾ ಬಳಸಿ ಆ ಪತ್ರಿಕೆಯನ್ನು ಬೆಳೆಸಿದರು; ಅದನ್ನೊಂದು ರಾಷ್ಟ್ರೀಯ ಗಣ್ಯ ಪತ್ರಿಕೆ ಯನ್ನಾಗಿ ಮಾಡಿದರು. 'ಹಿಂದೂ' ಪತ್ರಿಕೆಯ ಚರಿತ್ರೆ ಅಂದರೆ ಕಸ್ತೂರಿ ಯವರ ಬದುಕಿನ ಚರಿತ್ರೆಯೇ. ಅಷ್ಟರಮಟ್ಟಿಗೆ ಕಸ್ತೂರಿಯವರ ಬದುಕು 'ಹಿಂದೂ' ಪತ್ರಿಕೆಯೊಂದಿಗೆ ಬೆರೆತುಹೋಗಿತ್ತು!'.

ತಮಿಳುನಾಡಿನ ಒಂದು ಸುಸಂಸ್ಕೃತ ಮನೆತನದಲ್ಲಿ ಹುಟ್ಟಿದ ಕಸ್ತೂರಿಯವರು, ಲಾಯರ್ ವೃತ್ತಿಗೆ ಶಿಕ್ಷಣ ಪಡೆದು, ಕೊಯಮುತ್ತೂರ

ಮತ್ತು ಮದರಾಸಿನಲ್ಲಿ ಲಾಯರ್ ವೃತ್ತಿಯನ್ನು ನಡೆಸಿ ಬಹು ಬೇಗ ಆ ರಂಗದಲ್ಲಿ ಹೆಸರಾದರು; ಸಾರ್ವಜನಿಕ ಕ್ಷೇತ್ರದಲ್ಲೂ ಖ್ಯಾತರಾದರು. ಹಣವನ್ನು, ಕೀರ್ತಿಯನ್ನು ಯಥೇಚ್ಛವಾಗಿ ತಂದುಕೊಡುತ್ತಿದ್ದ ಲಾಯರ್ ಕೆಲಸವನ್ನು ಬಿಟ್ಟುಬಿಟ್ಟ ಕಸ್ತೂರಿಯವರು, ದೇಶಪ್ರೇಮದ ಹಂಬಲದಿಂದ 'ಹಿಂದೂ' ಪತ್ರಿಕೆಯನ್ನು ವಹಿಸಿಕೊಂಡು; ಅದನ್ನು ಸಾರ್ವಜನಿಕ ಸೇವೆಯ ಒಂದು ಮಾಧ್ಯಮವನ್ನಾಗಿ ಬಳಸಿಕೊಂಡರು. ಸುಶಿಕ್ಷಿತ ಜನತೆಗೆ ಮಾತ್ರ ಅಲ್ಲದೆ ಶ್ರೀಸಾಮಾನ್ಯನಿಗೂ ಪತ್ರಿಕೆ ಉಪಯುಕ್ತವಾಗಿರ ಬೇಕು ಎಂಬ ಉದ್ದೇಶದಿಂದ ಪತ್ರಿಕಾ ಧೋರಣೆಯನ್ನು ರೂಪಿಸಿದರು. 'ಸತ್ಯವನ್ನು ಹುಡುಕುವುದು ಒಂದು ಗೌರವದ ಕೆಲಸ; ಅದನ್ನು ಬೆಳಕಿಗೆ ತರುವುದು ಕರ್ತವ್ಯ' ಎಂಬುದು ಕಸ್ತೂರಿಯವರ ಪತ್ರಿಕಾ ಧರ್ಮ ಆಗಿತ್ತು. ಭಾರತವನ್ನು ಆಳುತ್ತಿದ್ದ ಅಂದಿನ ಬ್ರಿಟಿಷರ ಸರ್ಕಾರದ ನಾನಾ ಬಗೆಯ ಅನ್ಯಾಯಗಳನ್ನು ಅತಿರೇಕಗಳನ್ನು 'ಹಿಂದೂ' ಪತ್ರಿಕೆಯಲ್ಲಿ ನಿರ್ಭಯವಾಗಿ ಪ್ರಕಟಿಸಿದ್ದು ಕಸ್ತೂರಿಯವರ ದೊಡ್ಡ ಸಾಧನೆ. ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆಯ ಧೋರಣೆಗಳನ್ನು ಪತ್ರಿಕೆಯಲ್ಲಿ ಎತ್ತಿ ಹಿಡಿದರು. ಅನಿಬೆಸೆಂಟ್, ಗಾಂಧೀಜಿ, ರಾಜಾಜಿ ಮುಂತಾದ ರಾಷ್ಟ್ರ ನಾಯಕರ ಒಡನಾಡಿಗಳಾಗಿದ್ದ ಇವರು, ತಮ್ಮ ನಡೆ–ನುಡಿಗಳಿಂದ, ಅವರ ಮೆಚ್ಚುಗೆಗೆ ಪಾತ್ರರಾಗಿದ್ದರು. ವ್ಯಕ್ತಿಯಾಗಿ ಒಂದು 'ಸಂಸ್ಥೆ' ಯಂತಿದ್ದ ಕಸ್ತೂರಿಯವರು, ವೈಯಕ್ತಿಕ ಜೀವನದಲ್ಲಿ ಹಲವು ಬಗೆಯ ನೋವನ್ನು ಉಂಡರು. ಆದರೆ ಕರ್ತವ್ಯದಲ್ಲಿ ಅದನ್ನು ಮರೆತು ಬಾಳಿದರು. ಸರಳರೂ, ಉದಾರಿಗಳೂ, ವಿಶಾಲ ಮನೋಭಾವದವರೂ ಆಗಿದ್ದ ಕಸ್ತೂರಿಯವರ ಬದುಕನ್ನು ಅಚ್ಚುಕಟ್ಟಾಗಿ ಈ ಪುಸ್ತಕದಲ್ಲಿ ಪರಿಚಯಿಸಲಾಗಿದೆ.

## ೧೩ 'ಪುರುಷೋತ್ತಮದಾಸ್ ಟಾಂಡನ್'

### ನೀಲತ್ತಳ್ಳಿ ಕಸ್ತೂರಿ

ತ್ಯಾಗ, ಸೇವೆ, ಶಿಸ್ತು ಮತ್ತು ಸರಳತೆಗೆ ಹೆಸರಾಗಿದ್ದ ಪುರುಷೋತ್ತಮದಾಸ್ ಟಾಂಡನ್ ಅವರು, ಕೈತುಂಬ ಹಣ ತರುತ್ತಿದ್ದ ವಕೀಲ

ವೃತ್ತಿಯನ್ನು ಬಿಟ್ಟು, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿ, ಹಲವು ಬಾರಿ ಜೈಲುವಾಸವನ್ನೂ ಅನುಭವಿಸಿದರು; ಸ್ವತಂತ್ರ ಭಾರತದ ಅಭಿವೃದ್ಧಿಗೂ ಶ್ರಮಿಸಿದರು. ಅಲಹಬಾದ್‌ನ ಪ್ರಸಿದ್ಧ 'ಟಾಂಡನ್' ಮನೆತನದಲ್ಲಿ ಜನಿಸಿದ ಇವರು, ವಕೀಲ ವೃತ್ತಿಗೆ ಶಿಕ್ಷಣ ಪಡೆದು, ಆಗ್ಗೆ ಹೆಸರಾಂತ ವಕೀಲರಾಗಿದ್ದ ಸರ್ ತೇಜ್ ಬಹದ್ದೂರ್ ಸಪ್ರು ಅವರಲ್ಲಿ ವಕೀಲ ಕೆಲಸವನ್ನು ಆರಂಭಿಸಿ, ಸ್ವಲ್ಪ ದಿನಗಳಲ್ಲಿಯೇ ಆ ಕ್ಷೇತ್ರದಲ್ಲಿ ಹೆಸರನ್ನು, ಹಣವನ್ನೂ ಗಳಿಸಲಾರಂಭಿಸಿದರು. ಆದರೆ ದೇಶಭಕ್ತರಾದ ಪಂಡಿತ ಮದನ ಮೋಹನ ಮಾಳವೀಯ ಅವರ ಪ್ರಭಾವಕ್ಕೆ ಒಳಗಾಗಿ, ವಕೀಲ ವೃತ್ತಿಯನ್ನು ಬಿಟ್ಟು ದೇಶಸೇವೆಗೆ ಇಳಿದರು. ಅಲಹಬಾದ್ ಪುರಸಭೆಯ ಅಧ್ಯಕ್ಷರಾಗಿ ಸಾರ್ವಜನಿಕ ಸೇವೆಯನ್ನು ನಿರ್ವಹಿಸಿದ ಇವರು, ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷರಾಗಿ, ಲೋಕಸಭೆ ಮತ್ತು ರಾಜ್ಯಸಭೆಯ ಸದಸ್ಯರಾಗಿಯೂ ಸೇವೆ ಸಲ್ಲಿಸಿದರು. ಶಿಸ್ತು ದಕ್ಷತೆ ಮತ್ತು ಪ್ರಾಮಾಣಿಕತೆ ಇವರ ವ್ಯಕ್ತಿತ್ವದ ಹೃದಯ ಗುಣಗಳು. ತುಂಬ ಧರ್ಮನಿಷ್ಠರಾಗಿದ್ದ ಟಾಂಡನ್ನರನ್ನು ಗಾಂಧೀಜಿ ಅವರು 'ರಾಜರ್ಷಿ' ಎಂದು ಕರೆದು ಗೌರವಿಸಿದ್ದರು. ಬಾರತ ಸರ್ಕಾರ ಇವರಿಗೆ 'ಭಾರತರತ್ನ' ಎಂಬ ಪ್ರಶಸ್ತಿಯನ್ನಿತ್ತು ಗೌರವಿಸಿತ್ತು. ಇಂಥ ತ್ಯಾಗಜೀವಿಯ, ದೊಡ್ಡ ದೇಶಭಕ್ತರ ಆದರ್ಶ ಬದುಕಿನ ಪರಿಚಯವನ್ನು ಈ ಪುಸ್ತಿಕೆಯಲ್ಲಿ ಅಡಕವಾಗಿ ಸಂಗ್ರಹಿಸಲಾಗಿದೆ.

## ೧೭ 'ನಾರಾಯಣ ಮಲ್ಹಾರ್ ಜೋಷಿ'

### ಎಲ್. ಎಸ್. ಶೇಷಗಿರಿರಾವ್

ಸ್ವಾತಂತ್ರ್ಯ ಪೂರ್ವ ಭಾರತದಲ್ಲಿ ಕಾರ್ಮಿಕರ ಕಲ್ಯಾಣಕ್ಕಾಗಿ ಬಹುವಾಗಿ ಶ್ರಮಿಸಿದ ಪ್ರಸಿದ್ಧ ಕಾರ್ಮಿಕ ನಾಯಕರು; ಸಮಾಜಸುಧಾರಕರು. ಸಮಾಜಸೇವೆಯ ಹಂಬಲದಿಂದ ತಮ್ಮ ಮೂವತ್ತನೆಯ ವಯಸ್ಸಿನಲ್ಲಿ 'ಸರ್ವೆಂಟ್ಸ್ ಆಫ್ ಇಂಡಿಯ ಸೊಸೈಟಿ'ಯ ಸದಸ್ಯರಾಗಿ, ಆ ಸಂಸ್ಥೆಯ ಆದರ್ಶಗಳನ್ನು ಅನುಸರಿಸಿ ಬಾಳಿದರು. ಅನ್ಯಾಯಕ್ಕೆ ಮತ್ತು ತುಳಿತಕ್ಕೆ ಒಳಗಾದವರ ನೆರವಿಗೆ ಸದಾ ಸಿದ್ಧರಾಗಿರುತ್ತಿದ್ದ ಜೋಶಿಯವರು

ಹುಟ್ಟಿದ್ದು ಮಹಾರಾಷ್ಟ್ರದ ಗಡೆಗಾತನ್ ಎಂಬ ಒಂದು ಹಳ್ಳಿಯಲ್ಲಿ. ಸಂಸ್ಕೃತ ವಿದ್ವಾಂಸರಾಗಿದ್ದ ಇವರ ತಂದೆ, ಒಂದು ಸಂಸ್ಕೃತ ಶಾಲೆಯನ್ನು ನಡೆಸುತ್ತಿದ್ದರು. ಹುಟ್ಟೂರು ಮತ್ತು ಪುಣೆಯಲ್ಲಿ ಶಿಕ್ಷಣ ಪಡೆದ ಜೋಶಿಯವರು, ವಿದ್ಯಾರ್ಥಿ ದೆಸೆಯಲ್ಲಿಯೇ, ಸಮಾಜದಲ್ಲಿ ರೂಢವಾಗಿದ್ದ ಜೀತಪದ್ಧತಿ ಮತ್ತು ಮೂಢನಂಬಿಕೆಗಳನ್ನು ತೊಲಗಿಸುವುದರಲ್ಲಿ ಮತ್ತು ನ್ಯಾಯಕ್ಕೆ ಹೋರಾಡುವುದರಲ್ಲಿ ಆಸಕ್ತಿವಹಿಸಿದ್ದರು. ಉಪಾಧ್ಯಾಯರಾಗಿ ಕೆಲವು ಶಾಲೆಗಳಲ್ಲಿ ಕೆಲಸ ಮಾಡಿದರಾದರೂ, ಅವರ ಮನಸ್ಸು ಸಮಾಜಸೇವೆಗೆ ಹಾತೊರೆಯುತ್ತಿತ್ತು. ಗೋಪಾಲಕೃಷ್ಣ ಗೋಖಲೆಯವರು ಸ್ಥಾಪಿಸಿದ ಸರ್ವೆಂಟ್ಸ್ ಆಫ್ ಇಂಡಿಯ ಸೊಸೈಟಿ'ಯ ತತ್ವಗಳಿಗೆ ಒಲಿದು, ಅದರ ಸದಸ್ಯರಾಗಿ ದೇಶಸೇವೆಗೆ ಇಳಿದರು. ಪುಣೆ, ಗುಜರಾತು, 'ಮುಂಬಯಿ ಮುಂತಾದ ರಾಷ್ಟ್ರದ ನಾನ ಭಾಗಗಳಲ್ಲಿ ಸ್ವಯಂಸೇವಕರಾಗಿ ಕೆಲಸ ಮಾಡಿದರು. ಸದಾ ಬಗೆಬಗೆಯ ಕಷ್ಟಗಳಿಗೆ ಒಳಗಾಗುತ್ತಿದ್ದ ಬಡ ಕಾರ್ಮಿಕರ ಹಿತಸಾಧನೆಗಾಗಿಯೂ ಶ್ರಮಿಸಿದ ಜೋಶಿಯವರು 'ಕಾರ್ಮಿಕಬಂಧು' ಎಂದೂ ಹೆಸರುಗೊಂಡರು. ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲೂ ಭಾಗವಹಿಸಿದ್ದ ಜೋಶಿಯವರು, ಲಂಡನ್ನಿನಲ್ಲಿ ನಡೆದ ದುಂಡು ಮೇಜಿನ ಪರಿಷತ್ತಿಗೂ ಆಹ್ವಾನಿತರಾಗಿದ್ದರು. ಹೀಗೆ ತಮ್ಮ ಸುಮಾರು ಎಪ್ಪತ್ತು ವರ್ಷಗಳ ಜೀವನದಲ್ಲಿ ಸುಮಾರು ನಲವತ್ತು ವರ್ಷಗಳಷ್ಟು ದೀರ್ಘಕಾಲ ಸಾರ್ವಜನಿಕ ಸೇವೆ ಮಾಡಿದ ಜೋಶಿಯವರು 'ಸೇವಾ ಮನೋಭಾವ' ದ ಬದುಕಿನ ಪರಿಚಯವನ್ನು ಈ ಪುಸ್ತಕದಲ್ಲಿ ಮಾಡಿಕೊಡಲಾಗಿದೆ.

## ೧೮ 'ಉಮಾಕಾಂತ ಕೇಶವ ಆಪ್ಟೆ'

### ಪ್ರ. ಗ. ಸಹಸ್ರಬುದ್ಧೆ

ದೇಶಪ್ರೇಮ, ಧೈರ್ಯ, ಕಾರ್ಯನಿಷ್ಠೆ ಇವುಗಳ ಸಂಗಮದಂತಿದ್ದ ಕೇಶವ ಆಪ್ಟೆಯವರು ಹೆಸರಾಂತ ದೇಶ ಸೇವಕರು. ವಿದ್ಯಾರ್ಥಿ ದೆಸೆಯಲ್ಲಿಯೇ ಬಾಲಗಂಗಾಧರ ತಿಲಕರ ಪ್ರಭಾವಕ್ಕೆ ಒಳಗಾದ ಇವರು, ನಂತರ ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಸದಸ್ಯರಾಗಿ ಸುಮಾರು ದಶಕಗಳಷ್ಟು ದೀರ್ಘಕಾಲ ಆ ಸಂಘದ ಸಕ್ರಿಯ ಸದಸ್ಯರಾಗಿ ಕೆಲಸ

ಮಾಡಿದರು. ದೇಶಸೇವೆಯೇ ತಮ್ಮ ಜೀವನದ ಪರಮ ಧ್ಯೇಯ ಎಂದು ಭಾವಿಸಿ, ಅದರಂತೆ ನಡೆದರು. ಆಜನ್ಮ ಬ್ರಹ್ಮಚಾರಿಗಳಾಗಿ ಸರಳವೂ, ಶುದ್ಧವೂ ಆದ ಬದುಕನ್ನು ನಡೆಸಿದರು. ಓದು ಬರೆಹಗಳಲ್ಲೂ ಆಸಕ್ತಿ ವಹಿಸಿದ್ದ ಆಪ್ಟೆಯವರು, ಲಾಲಾಲಜಪತರಾಯರನ್ನು ಕುರಿತು ಒಂದು ಜೀವನ ಚರಿತ್ರೆಯನ್ನು ನಮ್ಮ ರಾಷ್ಟ್ರ ಜೀವನದ ಪರಂಪರೆ ಎಂಬ ಇನ್ನೊಂದು ಪುಸ್ತಕವನ್ನೂ ಬರೆದಿದ್ದಾರೆ. ಸಹಕಾರ್ಯ ಕರ್ತರರಿಗೆ, ಕಿರಿಯರಿಗೆ ಸ್ಫೂರ್ತಿಯ ಬುಗ್ಗೆಯಾಗಿದ್ದ ಆಪ್ಟೆಯವರ ನಡೆ-ನುಡಿಗಳಲ್ಲಿ ಸಾಧಿಸಿದ್ದ ಸಾಂಗತ್ಯವನ್ನು ಈ ಪುಸ್ತಕದಲ್ಲಿ ವಿವರವಾಗಿ ನಿರೂಪಿಸಲಾಗಿದೆ.

## ೧೯ 'ವರಾಹ ಮಿಹಿರ'

### ಎಸ್. ಆರ್. ಎನ್. ಮೂರ್ತಿ

'ಜ್ಞಾನದಾಹಿ' ಎಂದೇ ಹೆಸರಾಗಿದ್ದ ಭಾರತೀಯ ವಿಜ್ಞಾನಿ, ಸುಮಾರು ಸಾವಿರದ ಮುನ್ನೂರು ವರ್ಷಗಳ ಹಿಂದೆ ಇದ್ದರೆಂದು ನಂಬಲಾಗಿದೆ. ಭೂಮಿ, ಆಕಾಶ, ಶಿಲ್ಪ ಮುಂತಾದ ಹತ್ತಾರು ಕ್ಷೇತ್ರಗಳಲ್ಲಿ ಪ್ರಾವಿಣ್ಯತೆಯನ್ನು ಗಳಿಸಿಕೊಂಡಿದ್ದರು. ಸತತವಾಗಿ ಹೊಸದನ್ನು ಹುಡುಕುವ, ನೋಡುವ, ಕಲಿಯುವ ಕೆಲಸದಲ್ಲಿಯೇ ತಮ್ಮ ಬದುಕನ್ನು ಸವೆಸಿದರು ; ಅದರಲ್ಲಿಯೇ ತೃಪ್ತಿಯನ್ನು ಕಂಡವರು. ಜ್ಯೋತಿಷ್ಯ ಶಾಸ್ತ್ರಕ್ಕೆ ಸಂಬಂಧಿಸಿದಂತೆ ಸಂಸ್ಕೃತದಲ್ಲಿ 'ಪಂಚ ಸಿದ್ಧಾಂತಿಕ' 'ಬೃಹಜ್ಜಾತಕ' ಮತ್ತು 'ಬೃಹತ್ ಸಂಹಿತಾ' ಎಂಬ ಮೂರು ಪುಸ್ತಕಗಳನ್ನು ಬರೆದಿದ್ದಾರೆ. ಇಂಥವರ ಬದುಕು ಮತ್ತು ಕೃತಿಗಳ ಪರಿಚಯವನ್ನು ಈ ಪುಸ್ತಕದಲ್ಲಿ ಸರಳವಾಗಿ, ನೇರವಾಗಿ ನಿರೂಪಿಸಲಾಗಿದೆ.

## ೨೦ 'ಹುಯಿಲಗೋಳ ನಾರಾಯಣರಾವ'

### ಶಂಕರ ಪಾಟೀಲ

'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎಂಬ ನಾಡಗೀತೆಯನ್ನು ರಚಿಸಿ ಪ್ರಸಿದ್ಧರಾದ ಹುಯಿಲಗೋಳ ನಾರಾಯಣರಾಯರು ನಮ್ಮ ನಾಡಿನ ಹಿರಿಯ ಭಾಷಾ ಸೇವಕರಲ್ಲೊಬ್ಬರು ; ಉತ್ತರ ಕರ್ನಾಟಕ

ದಲ್ಲಿ ಮರಾಠಿ ಭಾಷೆ ವಿಜೃಂಭಿಸುತ್ತಿದ್ದ ದಿನಗಳಲ್ಲಿ ಕನ್ನಡದ ಸ್ಥಾನ-ಮಾನಗಳಿಗಾಗಿ ಹೋರಾಡಿದವರು. ವೃತ್ತಿಯಲ್ಲಿ ವಕೀಲರಾಗಿದ್ದರೂ ಪ್ರವೃತ್ತಿಯಲ್ಲಿ ಸಾಹಿತಿಗಳಾಗಿದ್ದ ಇವರು, ಅನೇಕ ನಾಟಕಗಳನ್ನು, ಪದ್ಯಗಳನ್ನು ರಚಿಸಿದರು. ವಜ್ರಮುಕುಟ, ಕನಕವಿಲಾಸ, ಪ್ರೇಮಾರ್ಜನ, ವಿದ್ಯಾರಣ್ಯ ಮೊದಲಾದ ಅನೇಕ ಸಾಮಾಜಿಕ ಮತ್ತು ಐತಿಹಾಸಿಕ ನಾಟಕಗಳನ್ನೂ ರಚಿಸಿದ್ದಾರೆ. ಇವರ ಹಲವು ನಾಟಕಗಳು ರಂಗಭೂಮಿಯ ಮೇಲೂ ಪ್ರದರ್ಶನಗೊಂಡು ಜನಪ್ರಿಯವಾದುವು. ದೈನಂದಿನ ಬದುಕಿನಲ್ಲಿ ಸರಸಿಗಳೂ ಸರಳರೂ ಆಗಿದ್ದ ನಾರಾಯಣರಾಯರ ವ್ಯಕ್ತಿತ್ವದ ಒಂದು 'ಸ್ಥೂಲ ಪರಿಚಯ' ವನ್ನು ಈ ಪುಸ್ತಕ ಮಾಡಿಕೊಡುತ್ತದೆ.

## ೨೧ 'ಸಂತ ವಿದ್ಯಾನಂದ'

### ಜಿ. ಬ್ರಹ್ಮಪ್ಪ

ಜೈನ ಸಮಾಜದ ಪೂಜ್ಯ ಗುರುಗಳಾದ ಶ್ರೀ ಏಲಾಚಾರ್ಯ ಮುನಿ ವಿದ್ಯಾನಂದರನ್ನು ಕುರಿತು ಜಿ. ಬ್ರಹ್ಮಪ್ಪನವರು 'ಸಂತ ವಿದ್ಯಾನಂದ' ಎಂಬ ಜೀವನ ಚರಿತ್ರೆಯನ್ನು ಬರೆದಿದ್ದಾರೆ. ಮೂಲತಃ ಕರ್ನಾಟಕದವರಾದ ಶ್ರೀ ಏಲಾಚಾರ್ಯರು, ಚಿಕ್ಕಂದಿನಲ್ಲಿಯೇ ಆಧ್ಯಾತ್ಮಿಕಕ್ಕೆ ಒಲಿದು, ದೀಕ್ಷೆ ಸ್ವೀಕರಿಸಿ, ಹಿಮಾಲಯ ಪ್ರದೇಶದಲ್ಲಿ ಸಂಚರಿಸಿ, ಜ್ಞಾನಿಗಳಾಗಿ, ಭಾರತದ ಜೈನ ಬಾಂಧವರಿಗೆ 'ಆಚಾರ್ಯ'ರಾಗಿ ಬೆಳೆದ ಬಗೆಯನ್ನು ಬ್ರಹ್ಮಪ್ಪನವರು ಈ ಪುಸ್ತಕದಲ್ಲಿ ವಿವರಿಸಿದ್ದಾರೆ. ವಿದ್ಯಾನಂದರ ಉಪದೇಶವನ್ನು, ಸಂದೇಶವನ್ನೂ ಸಂಗ್ರಹಿಸಿದ್ದಾರೆ. ಶ್ರದ್ಧಾವಂತರಿಗೆ, ಆಧ್ಯಾತ್ಮಿಕ ಜೀವಿಗಳಿಗೆ ಇದನ್ನೊಂದು ಉಪಯುಕ್ತ ಪುಸ್ತಕವನ್ನಾಗಿ ಮಾಡುವುದರಲ್ಲಿ ಬ್ರಹ್ಮಪ್ಪನವರು ಯಶಸ್ವಿಯಾಗಿದ್ದಾರೆ.

## ೨೨ 'ಬದುಕಿನ ಬೆಳಕು'

### ಜಿ. ರಮೇಶ ಉಪಾಧ್ಯಾಯ

ಚೆನ್ನಾಗಿ ಬದುಕುವುದು ಒಂದು ಕಲೆ; ಅದಕ್ಕೆ ಬೇಕಾದುದು ಹಲವು ಗುಣ ಸಂಸ್ಕಾರಗಳು. ಲೋಕಸ್ನೇಹ, ಯೋಗ್ಯ ಸಂಪಾದನೆ, ಸಾರ್ಥಕ

ವಿತರಣೆ, ಕುಟುಂಬ ನೆಮ್ಮದಿ ಇವೆಲ್ಲ ಒಳ್ಳೆಯ ಜೀವನಕ್ಕೆ ಅಗತ್ಯವಾದವು. ಇಂಥವುಗಳನ್ನು ಗಳಿಸುವುದು ಹೇಗೆ? ಆ ದಾರಿಯಲ್ಲಿ ಎದುರಾಗುವ ಸಮಸ್ಯೆಗಳು ಎಂಥವು? ಅವುಗಳನ್ನು ನಿವಾರಿಸಿಕೊಳ್ಳುವುದು ಹೇಗೆ? ಗೆಲುವಿನ ಗುಟ್ಟೇನು? ಈ ಮುಂತಾದ ಪ್ರಶ್ನೆಗಳಿಗೆ ಈ ಪುಸ್ತಕದಲ್ಲಿ ಉತ್ತರಗಳಿವೆ. ವಿಷಯ ನಿರೂಪಣೆಯಲ್ಲಿ ಸರಳತೆ, ಖಚಿತತೆ, ಆಕರ್ಷಕ ಶೈಲಿ ಈ ಪುಸ್ತಕದ ಪ್ರಧಾನ ಲಕ್ಷಣಗಳು. ಈ ಪುಸ್ತಕವನ್ನು ಒಮ್ಮೆ ಓದುವುದು ಮಾತ್ರ ಅಲ್ಲ; ಮತ್ತೆ ಮತ್ತೆ ಓದುವುದರಿಂದ; ಓದಿದ್ದನ್ನು ಮನನ ಮಾಡುವುದರಿಂದ ಪ್ರಯೋಜನ ಉಂಟು.

## ೨೩. 'ಡಿ. ದೇವರಾಜ ಅರಸು'

### ಎನ್. ಎಸ್. ರಾಮಪ್ರಸಾದ್

ಸುಮಾರು ಒಂದು ದಶಕದಷ್ಟು ದೀರ್ಘ ಕಾಲ ಕರ್ನಾಟಕದ ಮುಖ್ಯ ಮಂತ್ರಿಯಾಗಿ ಕಾರ್ಯ ನಿರ್ವಹಿಸಿದ ದೇವರಾಜ ಅರಸರದು ವರ್ಣಮಯ ವ್ಯಕ್ತಿತ್ವ. ಸಮಾಜದಲ್ಲಿ ತುಳಿತಕ್ಕೆ ಒಳಗಾದವರ ಏಳ್ಗೆಗಾಗಿ ಶ್ರಮಿಸಿದ ಅರಸಿನವರು ಉದಾರ ಮನಸ್ಸಿನವರು. ಅವರ ಬದುಕಿನ ನಾನಾ ಮುಖಗಳನ್ನೂ ಎನ್. ಎಸ್. ರಾಮಪ್ರಸಾದರು ಈ ಪುಸ್ತಿಕೆಯಲ್ಲಿ ಆತ್ಮೀಯವಾಗಿ ಪರಿಚಯಿಸಿದ್ದಾರೆ.

## ೨೪ 'ಕುಣಿಗಲ್ ರಾಮಾಶಾಸ್ತ್ರಿ'

### ಆರ್. ಎಸ್. ರಾಮರಾವ್

ತಮ್ಮ ಪಾಂಡಿತ್ಯ ಮತ್ತು ಶುದ್ಧ ಜೀವನದಿಂದ ಅಂದಿನ ಮೈಸೂರು ಸಂಸ್ಥಾನದಲ್ಲಿ ಹೆಸರಾಗಿದ್ದ ಕುಣಿಗಲ್ ರಾಮಾಶಾಸ್ತ್ರಿಗಳು ಸ್ವತಂತ್ರ ಮನೋಭಾವದ ವ್ಯಕ್ತಿಯಾಗಿದ್ದರು. ಅವರ ಸರಳ ಬದುಕಿನ ವಿವರಗಳನ್ನು ಆರ್. ಎಸ್. ರಾಮರಾಯರು ಈ ಪುಸ್ತಕದಲ್ಲಿ ಚೊಕ್ಕವಾಗಿ ಸಂಗ್ರಹಿಸಿದ್ದಾರೆ.

## ೨೫ ' ಜೆ. ಎಫ್. ಫ್ಲೀಟ್ '

### ಎ. ಎಂ. ಅಣ್ಣಿಗೇರಿ

ಕನ್ನಡ ಸೇವೆ ಮಾಡಿದ ಪಾಶ್ಚಾತ್ಯ ವಿದ್ವಾಂಸರಲ್ಲಿ ಗಣ್ಯರಾದ ಜಾನ್ ಫ್ಲೀಟರು ಶಾಸನ ಸಂಗ್ರಹ, ಜನಪದ ಸಾಹಿತ್ಯ ಸಂಗ್ರಹ ಮುಂತಾದ ಹಲವು ಕ್ಷೇತ್ರಗಳಲ್ಲಿ ಮಾಡಿದ ಕೆಲಸ ವಿಶೇಷವಾದುದು. ಅವರ ದುಡಿಮೆಯಿಂದ ಕರ್ನಾಟಕದ ಇತಿಹಾಸ ರಚನೆಗೆ ಆದ ಉಪಕಾರ ಬೆಲೆಯುಳ್ಳದ್ದು. ಈ ಹಿರಿಯ ವಿದ್ವಾಂಸರ ಕಾರ್ಯ ಸಾಧನೆಗಳ ವಸ್ತುನಿಷ್ಠ ಪರಿಚಯವಿದೆ ಈ ಪುಸ್ತಿಕೆಯಲ್ಲಿ.

## ೨೬ ' ಶಿಶುನಾಳ ಶರೀಫರು '

### ಸ. ಸ. ಮಾಳವಾಡ

ಮುಸ್ಲಿಂ ಮನೆತನದಲ್ಲಿ ಹುಟ್ಟಿ, ಚಿಕ್ಕಂದಿನಲ್ಲಿಯೇ ಆಧ್ಯಾತ್ಮಿಕಕ್ಕೆ ಒಲಿದು, ಎಲ್ಲ ಧರ್ಮಗಳೂ ಒಂದೇ ಎಂಬ ಉದಾತ್ತ ಭಾವನೆಯನ್ನು ಹೊಂದಿ, ಆದರಂತೆ ಬದುಕಿ ಬಾಳಿದ ಶಿಶುನಾಳ ಶರೀಫರು ಕರ್ನಾಟಕದ ಹಿರಿಯ ಅನುಭಾವಿಗಳು. ಶರೀಫರ ' ಭಕ್ತಿಜೀವನ 'ದ ಚೊಕ್ಕ ಪರಿಚಯವನ್ನೂ ಮಾಳವಾಡರು ಈ ಪುಸ್ತಿಕೆಯಲ್ಲಿ ಮಾಡಿಕೊಟ್ಟಿದ್ದಾರೆ.

## ೨೭ ' ಕುಂತಿ '

### ಎನ್. ಎಸ್. ಎಲ್. ಭಟ್ಟ

ದೊಡ್ಡ ರಾಜನೊಬ್ಬಳ ಮಗಳು; ಪಾಂಡುರಾಜನ ಪತ್ನಿ; ಪಾಂಡವರ ತಾಯಿ. ಆದರೆ ಬದುಕಿನುದ್ದಕ್ಕೂ ಬಗೆ ಬಗೆಯ ಕಷ್ಟಗಳು; ನಿಲ್ಲದ ಕಣ್ಣೀರು. ಆದರೆ ಅವನ್ನೆಲ್ಲಾ ಧೈರ್ಯದಿಂದ ಎದುರಿಸಿ, ಕೊನೆಯವರೆಗೂ ಮಕ್ಕಳಿಗೆ ರಕ್ಷಣೆಯ ಕೋಟೆಯನ್ನು ಒದಗಿಸಿದ ಕುಂತಿ, ಸಹನೆಯ ಮೂರ್ತಿ. ' ಆದರ್ಶ ಮಹಿಳೆ ' ಕುಂತಿಯ ಬದುಕಿನ ಸಾರ್ಥಕ ವೃತ್ತಾಂತ ಇದೆ ಈ ಪುಸ್ತಿಕೆಯಲ್ಲಿ.

## ೨೮ 'ಕೃಷ್ಣ ಚೈತನ್ಯ'

### ಎಸ್. ಜಿ. ಶ್ರೀಮತಿ

ಚಿಕ್ಕಂದಿನಲ್ಲಿಯೇ ಶ್ರೀಕೃಷ್ಣನ ಭಕ್ತರಾಗಿ, ಮುಂದೆ ಕೃಷ್ಣನ ಕೃ ಯಿಂದ ನಿರ್ಮಲವಾದ ಆನಂದವನ್ನು ಅನುಭವಿಸಿ, ಇತರರೂ ಅದನ ಪಡೆಯಲು ನೆರವಾದವರು. ಭಗವಂತನ ಕೃಪೆಯನ್ನು ಸಂಪಾದಿಸಲ ಜಾತಿ, ಪಂತಗಳಾಗಲಿ, ಪಾಂಡಿತ್ಯವಾಗಲಿ, ಮುಖ್ಯ ಅಲ್ಲ ; ಬೇಕಾದದ ಸಮರ್ಪಣ ಭಾವ ಎಂದು ಸಾರಿದ ಈ ಹಿರಿಯ ಸಂತರ ನಿರ್ಮಲವಾ ಬದುಕಿನ 'ಕಿರು ಚಿತ್ರಣ' ಇದೆ ಈ ಪುಸ್ತಿಕೆಯಲ್ಲಿ.

ಅರ್ಕಾವತಿ ಪ್ರಕಾಶನ  ದಶಮಾನೋತ್ಸವ ವರ್ಷ

೧೯೮೭

## ಕನ್ನಡ ಸಾಹಿತ್ಯಾಭ್ಯಾಸಿಗಳಿಗೆ ಉಪಯುಕ್ತ ಗ್ರಂಥಗಳು

| | | | |
|---|---|---|---|
| ೧ | ಪಂಪ : ಕೆಲವು ಮುಖಗಳು | ಸಿಪಿಕೆ | ಬೆಲೆ ರೂ ೯-೦೦ |
| ೨ | ಕವಿ ನೇಮಿಚಂದ್ರ | ಕೆ. ವೆಂಕಟರಾಮಪ್ಪ | ೬-೫೦ |
| ೩ | ಅಯ್ದು ಆರು ಲೇಖನಗಳು | ಎಸ್. ವಿ. ಪರಮೇಶ್ವರಭಟ್ಟ | ೬-೫೦ |
| ೪ | ಕುವೆಂಪು ಸಾಹಿತ್ಯ : ಅವಲೋಕನಗಳು | ಎಸ್. ಚನ್ನಪ್ಪ (ಸಂ) | ೬-೦೦ |
| ೫ | ಪುತಿನ ಕಾವ್ಯ ಮೀಮಾಂಸೆ | ಸಿಪಿಕೆ | ೮-೦೦ |
| ೬ | ಮಹಾಕವಿಯೊಡನೆ ಮಾತುಕಥೆ | ಸಿಪಿಕೆ | ೩-೦೦ |
| ೭ | ವಿನಾಯಕ ಸಾಹಿತ್ಯ ವಿಹಾರ | ಎಸ್. ಚನ್ನಪ್ಪ (ಸಂ) | ೧೫-೦೦ |
| ೮ | ಹತ್ತು ವ್ಯಕ್ತಿ ಚಿತ್ರಗಳು | ಎಸ್. ಚನ್ನಪ್ಪ | ೬-೦೦ |
| ೯ | ಇಪ್ಪತ್ತು ವ್ಯಕ್ತಿ ಚಿತ್ರಗಳು | ಎಸ್. ಚನ್ನಪ್ಪ | ೨೦-೦೦ |
| ೧೦ | ಸಾಹಿತ್ಯ ಪರಿಚಾರಕ | ಎಸ್. ಚನ್ನಪ್ಪ | ೨-೦೦ |
| ೧೧ | ಕಾರಂತ : ಹಕ್ಕಿನೋಟ | ಎಸ್. ಚನ್ನಪ್ಪ | ೨-೦೦ |
| ೧೨ | ಕೈಲಾಸಂ ಸ್ಮರಣೆ | ಎಸ್. ಚನ್ನಪ್ಪ | ೨-೦೦ |
| ೧೩ | ಕೃತಿ ನೋಟ | ಎಸ್. ಚನ್ನಪ್ಪ | ೫-೦೦ |
| ೧೪ | ಧರ್ಮ ದೀಪಕರು | ಎಸ್. ಚನ್ನಪ್ಪ | ೫-೦೦ |
| ೧೫ | ವಚನ ವಾಹಿನಿ | ಎಸ್. ಚನ್ನಪ್ಪ | ೩-೦೦ |
| ೧೬ | ಮಕ್ಕಳ ಸಾಹಿತ್ಯ ಸಂಪುಟ | ಎಸ್. ಚನ್ನಪ್ಪ | ೩೦-೦೦ |

**ಅರ್ಕಾವತಿ ಪ್ರಕಾಶನ ✿ ಪ್ರಕಾಶಕರು ✿ ಮೈಸೂರು**

ಕೃತಿ ನೋಟ / ಬೆಲೆ : ಐದು ರೂಪಾಯಿ